ಲಲಿತ ಸಾಹಿತ್ಯ ಮಾಲೆಯ ೫ನೆ ವರ್ಷದ ೪ನೆಯ ಕುಡಿ

# ಜೀವನ ಪಾಠಗಳು


ಪ್ರಿನ್ಸಿಪಾಲ

ವಿ. ಕೃ. ಗೋಕಾಕ ಬಿ. ಎ. ( ಆಕ್ಸಫರ್ಡ )

ಕೊಲ್ಹಾಪುರ



ಲಲಿತ ಸಾಹಿತ್ಯಮಾಲೆ

ಧಾರವಾಡ

ಡಿಸೆಂಬರ

೧೯೪೯

೧-೪-೦

ಚುಳಕಿ ಗೋವಿಂದರಾಯರು
ಸಂಪಾದಕರು: ಲಲಿತ ಸಾಹಿತ್ಯಮಾಲೆ, ಧಾರವಾಡ

೫ನೆಯ ವರುಷದ ೫ನೆಯ ಕುಡಿ

# 'ಡೋರಾ ಮತ್ತು ಇತರ ಕತೆಗಳು'

ಟೆನಿಸನ್, ಅನಾಟೋಲ ಫ್ರಾನ್ಸ ಮೊದಲಾದವರ ಕತೆಗಳು

ಅನು. : ಗೋ. ವೆ. ಚುಳಕಿ

ಮಾರಾಟಗಾರರು :
ಮನೋಹರ ಗ್ರಂಥ ಭಾಂಡಾರ, ಧಾರವಾಡ
ಕನ್ನಡ ಪುಸ್ತಕಾಲಯ, ಬೆಳಗಾವಿ

ಮುದ್ರಕರು :
ಕುಲಕರ್ಣಿ ಶಂಕರರಾಯರು
ಲಲಿತ ಮುದ್ರಣಾಲಯ
ಧಾರವಾಡ

ಪ್ರಕಾಶಕರು :
ಡಿ. ಬಿ. ಕುಲಕರ್ಣಿ
ಮನೋಹರ ಗ್ರಂಥ ಭಾಂಡಾರ
ಧಾರವಾಡ

## ಸಂಪಾದಕರ ಅರಿಕೆ

ನಮ್ಮ ಲಲಿತ ಸಾಹಿತ್ಯ ಮಾಲೆಯ ೫ ನೆಯ ವರುಷದ ೪ ನೆಯ ಕುಡಿಯೇ ಈ 'ಜೀವನ ಪಾಠಗಳು' ಎಂಬುದಾಗಿದೆ. ಈ 'ಜೀವನ ಪಾಠಗಳು' ಎಂಬುದನ್ನು ಬರೆದವರು ಪ್ರಿನ್ಸಿಪಾಲ ವಿ. ಕೃ. ಗೋಕಾಕ ಬಿ. ಎ. ಆಕ್ಸಫರ್ಡ ಅವರು. ನಮ್ಮ ಮಾಲೆಯಲ್ಲಿ ಪ್ರಕಟಿಸಲು ಒಂದು ಕೃತಿಯನ್ನು ಒದಗಿಸಿ ಕೊಡಲು ಅವರನ್ನು ಬಿನ್ನಹಿಸಿಕೊಂಡೆವು. ಆ ಬಿನ್ನಹವನ್ನು ಮನ್ನಿಸಿ ಅವರು ಈ ಕೃತಿಯನ್ನು ಪ್ರಕಾಶನಗೊಳಿಸಲು ಅನುಮತಿಯನ್ನು ಕೊಟ್ಟುದಕ್ಕಾಗಿ ನಾವು ಅವರಿಗೆ ತುಂಬಾ ಕೃತಜ್ಞರಾಗಿದ್ದೇವೆ.

ಪ್ರಿನ್ಸಿಪಾಲ ವಿ. ಕೃ. ಗೋಕಾಕ ಅವರು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಖ್ಯಾತನಾಮರಾಗಿದ್ದಾರೆಂಬುದನ್ನು ಹೇಳಲಿಕ್ಕೇ ಬೇಡ. ಅವರ ಈ ಕೃತಿ ನಮಗೆ ದೊರೆತುದಕ್ಕೆ ನಮಗೆ ಆನಂದವೆನಿಸಿದೆ ನಮ್ಮ ವಾಚಕರೂ ಅವರ ಈ ಕೃತಿಯನ್ನು ಆಸ್ಥೆಯಿಂದ ಬರಮಾಡಿಕೊಳ್ಳುವರೆಂದು ನಾವು ನಂಬಿದ್ದೇವೆ

ಈ ಜೀವನ ಪಾಠಗಳಲ್ಲಿ ಕೆಲವು ಓಲೆಗಳೂ, ಕೆಲವು ಪ್ರಬಂಧಗಳೂ ಇವೆ ಆತ್ಮೋನ್ನತಿ ಹಾಗು ಸಮಾಜೋದ್ಧಾರ ಎಂಬೆರಡು ಸೂತ್ರಗಳನ್ನು ಹಿಡಿದು ಈ ಕೃತಿಗಳು ರಚಿತವಾಗಿವೆ. ಓಲೆಗಳು ಆಕರ್ಷಣೀಯವಾಗಿವೆ; ಪ್ರಬಂಧಗಳು ಆತ್ಮಪರೀಕ್ಷಣದ ಮನಃಸ್ಥಿತಿಯಲ್ಲಿ ಬರೆದುದರಿಂದ ಅನೇಕಾನೇಕ ಉಪಯುಕ್ತ ವಿಚಾರಲಹರಿಗಳಿಂದ ತುಂಬಿಕೊಂಡಿವೆ. ಅಂಥವುಗಳು ನಾಡ ಎಳೆಯರಿಗೂ, ಬೇರೆಯವರಿಗೂ ಜೀವನದಲ್ಲಿ ಪಾಠಗಲಿಯಲು ಅನುಕೂಲವಾಗುವವೆಂದು ನಾವು ಹಾರೈಸಿ ಇದನ್ನು ಪ್ರಕಟಿಸಿದ್ದೇವೆ.

ಈ ವರುಷದಲ್ಲಿ ಇನ್ನೂ ಒಂದು ಕುಡಿಯು ಹೊರಬೀಳಬೇಕಾಗಿದೆ. ಅದು 'ದೋರಾ ಮತ್ತು ಇತರ ಕತೆಗಳು' ಎಂಬ ಕಥಾಸಂಕಲನವಾಗಿದೆ. ಅದರ ಮುದ್ರಣವೂ ನಡೆದಿದ್ದು, ಅದೂ ನಮ್ಮ ವಾಚಕರ ಕೈಗೆ ಬೇಗನೆ ಸೇರುವದೆಂದು ಹೇಳಬಯಸುತ್ತೇವೆ. ಅದರ ಮುಂದೆ ೬ ನೇ ವರ್ಷದ ಮೊದಲ ಕುಡಿಯು ಪ್ರಕಟವಾಗುವದು.

**ಗೋ. ವೆ. ಚುಳಕಿ**

# ಪರಿವಿಡಿ

## ಜೀವನ ಪಾಠಗಳು



---

# ಜೀವನ ಪಾಠಗಳು

## ಮುನ್ನುಡಿ

ನನ್ನ ಸ್ನೇಹಿತನಾದ ವನಮಾಲಿಯ ಮನೆಗೆ ಹೋದಾಗ ಆತನು ಪತ್ನಿಯೊಡನೆ ಊಟಮಾಡುತ್ತ ಕುಳಿತಿದ್ದನು ಪಡಸಾಲೆಯ ನಟ್ಟ ನಡುವೆ ಒಂದು ಟೇಬಲ್ಲು; ಅಗ್ರಸ್ಥಾನದಲ್ಲಿ ವನಮಾಲಿಯ ಹೆಂಡತಿಯಾದ ಲಲಿತಾ; ಅವಳ ಬಲಬದಿಗೆ ವನಮಾಲಿ; ಎಡಬದಿಗೆ ಸಣ್ಣ ಮಕ್ಕಳಿಬ್ಬರು : ಈ ರೀತಿಯಾಗಿ ಅವರ ಪಂತಿ ನಡೆದಿತ್ತು. ನಾನು ಹೋದಾಗ ವನಮಾಲಿಯು ನಗುತ್ತ ನನ್ನನ್ನು ಬರಮಾಡಿಕೊಂಡು ತನ್ನ ಹತ್ತಿರದ ಕುರ್ಚಿಯ ಮೇಲೆ ಕುಳ್ಳಿರಿಸಿದನು. ಲಲಿತೆಯು ನಾನು ಬಂದೊಡನೆ ಎದ್ದು ಹೋಗಲಿಲ್ಲ. 'ನಮ್ಮೊಡನೆ ಪಂತಿಗೆ ಬರುತ್ತೀರಾ ?' ಎಂದು ನಗೆ ಮುಖದಿಂದ ಕೇಳಿದಳು. ನನ್ನ ಊಟವಾಗಿತ್ತು. ಇನ್ನೊಂದು ವೇಳೆ ಹಾಗೆ ಮಾಡಬಹುದೆಂದು ನಾನು ವಿನಯದಿಂದ ಉತ್ತರಕೊಟ್ಟೆ. ಮಾತು ಮತ್ತೆ ಮುಂದೆ ಸಾಗಿದವು; ಊಟ ಮುಗಿದ ಮೇಲೆ ಲಲಿತೆಯು ಹುಡುಗರ ಕೈತೊಳೆಯುವದರಲ್ಲಿ ತೊಡಗಿದಳು. ವನಮಾಲಿಯು ನನ್ನೊಡನೆ ಮಾತು ಬೆಳೆಸಿದನು.

'ಅಲ್ಲೋ! ವನು! ಪ್ರಪಂಚದಲ್ಲಿ ಸುಖವಿಲ್ಲದೆ ಜಗತ್ತೆಲ್ಲ ಶೂನ್ಯವೆಂದು ಪ್ರತಿಪಾದಿಸುವವರು ಇದ್ದಾರೆ. ಮದುವೆಯಾದ ಮೇಲೆ ಪತಿ-ಪತ್ನಿಯರ ನಡುವಿನ ತಾಳವೆಲ್ಲ ಬೇತಾಳವಾಗಿ ಮದುವೆಯೆಂದರೆ ಒಂದು ಮಹಾರೋಗವೆಂದು ಸಾಧಿಸುವವರು ಇದ್ದಾರೆ. ಆದರೆ ನಿನ್ನ ರೀತಿಯೆ ಬೇರೆ. ಗೀತೆಯೊಡನೆ ಸಂಗೀತವನ್ನು ಬೆರಸಿದಾಗ ಹೊರ ಹೊಮ್ಮುವ ಮಧುರ ಗಾನದಂತೆ ನಿನ್ನ ಜೀವನವು ಒಂದು ದಿವ್ಯ ಶ್ರುತಿಯನ್ನು ಹಿಡಿದು ಮುಂದೆ ಸಾಗಿದೆ

ಇದರ ನಿದರ್ಶನವನ್ನು ನಿನ್ನ ಮನೆಯಲ್ಲಿ ನಾನು ಕಣ್ಣಾರೆ ಕಂಡಿದ್ದೇನೆ. ಅದರ ರಹಸ್ಯವೇನು ? ನನ್ನೆದುರಿಗೆ ಒಡನುಡಿಯಬಹುದಲ್ಲ ? '

ಲಲಿತೆಯು ಸಿದ್ಧವಾಗಿರಿಸಿದ್ದ ವೀಳ್ಯೆಯನ್ನು ಮೆಲ್ಲುತ್ತ 'ಅದರಲ್ಲೇನಿದೆ? ನಾನು ಬರೆದ ಓಲೆಗಳೇ ಅಂತರಂಗದ ಕದವನ್ನು ತೆರೆದವು' ಎಂದು ವನಮಾಲಿಯು ನಕ್ಕನು.

' ಅಲ್ಲೋ ! ವನು ! ಓಲೆಗಳೆಂದರೇನು ? ಎಲ್ಲರೂ ಓಲೆಗಳನ್ನು ಬರೆಯುತ್ತಾರೆ. ಆದರೆ ನಿನ್ನಂತೆ ಒಲವಿನಲ್ಲಿ ಎಲ್ಲರೂ ವಿಹರಿಸುವದಿಲ್ಲ. ಅದೆಂಥ ಪತ್ರಗಳನ್ನು ನೀನು ಬರೆದೆ?' ಎಂದು ಕೆಣಕುವ ದನಿಯಲ್ಲಿ ನಾನು ಕೇಳಿದೆನು.

ಆಂದು ಸಹಜಾನಂದದಲ್ಲಿದ್ದ ವನಮಾಲಿಯು ಎದ್ದು ಕಪಾಟನೊಳಗಿಂದ ರೇಶ್ಮಿಯಿಂದ ಅಂದವಾಗಿ ಕಟ್ಟಿಟ್ಟ ಪತ್ರಗಳ ಪುಡಿಕೆಯೊಂದನ್ನು ತೆಗೆದನು. ಅದೇ ಸುಮಾರಕ್ಕೆ ಲಲಿತೆಯು ಕೋಣೆಯೊಳಗೆ ಕಾಲಿಟ್ಟಳು. ಅವಳ ಬರವಿನಿಂದ ವನಮಾಲಿಯು ಸಂಕೋಚ ಪಡುವದನ್ನು ಕಂಡು ನಾನು ' ಈ ಪತ್ರಗಳನ್ನು ನಾನು ನೋಡಲು ಅಡ್ಡಿಯಿಲ್ಲವಲ್ಲ ?' ಎಂದು ಲಲಿತಕ್ಕನನ್ನು ಕುರಿತು ಪ್ರಶ್ನಿಸಿದೆನು.

' ನನ್ನ ಮದುವೆಯಾಗುವದಕ್ಕಿಂತ ಮುಂಚೆ ಕೂಡಿ ಬೆಳೆದ ಗೆಳೆಯರು ನೀವು. ನಿಮ್ಮ ಗೆಳೆತನಕ್ಕೆ ನಾನೇಕೆ ಕಲ್ಲೊಗೆಯಲಿ ? ' ಎಂದು ಲಲಿತೆಯು ನಕ್ಕಳು. ಆ ಮೇಲೆ ಸಹಜ ಸಂಭಾಷಣೆಯು ಮುಗಿದನಂತರ ವನಮಾಲಿಯಿಂದ ಸಂಪಾದಿಸಿದ್ದ ಪತ್ರಗಳನ್ನೆಲ್ಲ ನಾನು ಓದಿ ನೋಡಿದೆ. ಹೊಸ ತೊಂದು ಜೀವನದ ಬೆಳಕೇ ಅವುಗಳಲ್ಲಿ ಮೂಡಿತ್ತು. ಬರಹಗಾರನಾಗಿ ಉದಾತ್ತ ಧ್ಯೇಯಗಳನ್ನು ಶಬ್ದಗಳಿಂದ ಚಿತ್ರಿಸಿ ಜನತೆಯ ಮನಸ್ಸನ್ನು ತಿದ್ದಬಹುದೆಂಬ ಹೆಮ್ಮೆಯುಳ್ಳ ನನ್ನಲ್ಲಿ ಆ ಒಲವಿನೋಲೆಗಳು ಆಶ್ಚರ್ಯವನ್ನುಂಟು ಮಾಡಿದವು. ವನಮಾಲಿಯೇನು ಸಾಹಿತಿಯಲ್ಲ. ತನ್ನದೇ ಆದ ಒಂದು ಶೈಲಿಯನ್ನು ಸಿದ್ಧಪಡಿಸಿಕೊಂಡವನಲ್ಲ. ಆದರೆ ಸಾಹಿತಿಗಳ ಕಣ್ಣು ಕುಕ್ಕಿಸುವ ಹಾಗೆ ಪ್ರೀತಿಯ ನಕಾಶವನ್ನೆಲ್ಲ ತನ್ನ ಪತ್ರಗಳಲ್ಲಿ ತುಂಬಿದ್ದನು. ಮರುದಿನ ವನಮಾಲಿಯ ಮನೆಗೆ ಹೋದಾಗ ನನ್ನ ಮನಸ್ಸಿನಲ್ಲಿ ಒಂದೇ ಒಂದು ವಿಚಾರವು ಸುಳಿದಾಡುತ್ತಿತ್ತು; ಈ ಒಲವಿನೋಲೆಗಳನ್ನು ಮುದ್ರಿಸಿ ಜನತೆಯ ಎದುರಿಗಿಟ್ಟರೆ ಹೇಗೆ ? ವನಮಾಲಿಯೇನು ಇದಕ್ಕೆ ಒಪ್ಪದಾದ.

'ನಮ್ಮ ಗುಟ್ಟಿನ ಸಂಸಾರವನ್ನೆಲ್ಲ ರಟ್ಟುಮಾಡಿ ಗೆಳೆಯನ 'ಬದ್ನಾಮಿ' ಮಾಡುವದು ನಿನಗೆ ಯೋಗ್ಯವೆ?' ಎಂದು ತುಸು ಬಿಗುವಿನಿಂದ ಕೇಳಿದ; ಆದರೆ ನನ್ನ ಉದ್ದೇಶವನ್ನು ಸಾಧಿಸುವ ಯುಕ್ತಿಯನ್ನು ನಾನು ಮೊದಲೇ ಕಲಿತಿದ್ದೆನು. ಲಲಿತಕ್ಕನನ್ನು ಕರೆದು ಅವರೆದುರಿಗೆ ಒಂದು ಉಪನ್ಯಾಸವನ್ನೇ ಪ್ರಾರಂಭಿಸಿದೆನು. 'ನೋಡಿರಿ, ನಮ್ಮ ಸಮಾಜದಲ್ಲಿ ಹೆಣ್ಣು ಮಕ್ಕಳೆಂದರೆ ಆಳು ಮಕ್ಕಳಾಗಿದ್ದಾರೆ. ಮದುವೆಯಾಗುವದೆಂದರೆ ಕೇವಲ ತನ್ನ ಸುಖಕ್ಕೆಂದು ಗಂಡಿನ ಭಾವನೆಯಾಗಿದೆ! ದುಡಿತಕ್ಕೆಂದು ಹೆಣ್ಣಿನ ದಾಗಿದೆ. 'ಪತಿದೇವೋ ಭವ' ಎಂದು ಉಪದೇಶಿಸಿದವರು ಪತ್ನಿಯೂ ದೇವಿಯೆಂಬುದನ್ನು ತಿಳಿಸಿಕೊಡಲು ಮರೆತುಬಿಟ್ಟರು. ಹೀಗಾಗಿ ದೇಶದಲ್ಲೆಲ್ಲ ಹೆಣ್ಣೆಂದರೆ ಒಂದು ವಸ್ತುವಾಗಿ ಹೋಯಿತು. ಅಂದೂ ದಾಂಪತ್ಯದಲ್ಲಿ ಪ್ರೇಮವಿತ್ತು; ಆದರೆ ಅದು ಸೇವ್ಯ-ಸೇವಕ ಭಾವನೆಯನ್ನೇ ಹೆಚ್ಚಾಗಿ ಅವಲಂಬಿಸಿತ್ತು. ಗಂಡು–ಹೆಣ್ಣೆಂದರೆ, ಸರಿಜೋಡಿಯಾದ ಜೋಡಿಯೆಂಬ ಭಾವನೆಯು ಈಗ ಮತ್ತೆ ಸಮಾಜದ ಚಿತ್ತವನ್ನು ಆಕರ್ಷಿಸಹತ್ತಿದೆ. ಆದರೂ ಮನೆ ಮನೆಯಲ್ಲಿ ಈ ಮಾತು ಇನ್ನೂ ನಿಲ್ಲಬೇಕಾಗಿದೆ. ಮೊನ್ನೆ ಮೊನ್ನೆ ನನ್ನೊಬ್ಬ ಟ್ರೇ. ಕಾ. ಸ್ನೇಹಿತರ ಕಡೆಗೆ ಹೋಗಿದ್ದೆ. ಕಿರಿದಾದ ಅಡುಗೆಮನೆಯೊಳಗೆ ಪಂಜರದಲ್ಲಿ ಸಿಕ್ಕ ಗಿಳಿಯಂತೆ ನಿಂತಿದ್ದ ತಮ್ಮ ಪತ್ನಿಯನ್ನು ಕುರಿತು ಅವರು ಚಹಮಾಡಲು ನಾವು ಕೂತಲ್ಲಿಂದ ಒದರಿದರು; ಒದರಿ, 'ನೋಡಪ್ಪಾ! ನಾವು ಮದುವೆಮಾಡಿಕೊಳ್ಳುವದೇತಕ್ಕೆ? ನಮ್ಮ ಸುಖಕ್ಕಾಗಿ!' ಎಂದು ಉದ್ಗಾರ ತೆಗೆದರು. ಪಾಪ! ಆ ಪ್ರಾಣಿ ಇಂಥ ಉದ್ಗಾರಗಳನ್ನು ಎಷ್ಟು ಸಲ ಕೇಳಿರುವರೋ ಯಾರು ಬಲ್ಲರು?'

ಲಲಿತಕ್ಕನ ಮೋರೆಯು ಸಣ್ಣದಾಯಿತು. ಇಂಥ ದುಃಖಮಯ ಸನ್ನಿವೇಶಗಳು ಕಣ್ಣಿಗೆ ಬಿದ್ದಾಗೆಲ್ಲ, ಕಿವಿಗೆ ಕೇಳಿಸಿದಾಗೆಲ್ಲ, ಆಕೆ ಹೀಗೆಯೇ ನೊಂದುಕೊಳ್ಳುತ್ತಾಳೆ.

"ಅದಕ್ಕಾಗಿಯೇ ಈಗ ನಾನು ಹೇಳುವದು. ಈ ಓಲೆಗಳನ್ನು ಪ್ರಸಿದ್ಧಿಸಲು ನನಗೆ ಅಪ್ಪಣೆಕೊಡಿರಿ. ಇವುಗಳನ್ನೋದಿದ ಎಳೆಯರಿಗೆ ಜೀವನದ ಹೊಂಗನಸನ್ನು ಕಟ್ಟಲು ಅನುಕೂಲವಾಗುವದು" ಎಂದು ನಾನು ಸಮಯೋಚಿತವಾಗಿ ಬಾಯಿ ಹಾಕಿದೆನು.

"ಅಚ್ಚು ಹಾಕಿಸಿಕೊಳ್ಳಿರಿ. ಉಪಯೋಗವಾಗುವ ಹಾಗಿದ್ದರೆ ನಾನೇಕೆ ಬೇಡೆನ್ನಲಿ? ನಮ್ಮ ಹೆಸರನ್ನು ತೆಗೆದು ಹಾಕಿರಿ. ತಾರೀಖುಗಳನ್ನು ತೊಡೆದು ಬಿಡಿರಿ " ಎಂದು ಮುಂತಾಗಿ ಹೇಳಿ ಲಲಿತಕ್ಕ ತಮ್ಮ ಒಪ್ಪಿಗೆಯನ್ನು ಸೂಚಿಸಿದರು.

ಆಗ ವನಮಾಲಿಗೆ ನಿರ್ವಾಹವಿಲ್ಲದೆ ಬಂತು. "ಈಗ ಹೇಗಾಯಿತು?" ಎಂದು ನಾನು ನಕ್ಕು ಕೇಳಿದೆ. "ಅದೇಕೆ ? ನಾನೆಲ್ಲಿ ಬೇಡವೆಂದಿದ್ದೆ ? ಗೆಳೆಯನ 'ಬದ್ನಾಮಿ' ಬೇಡೆಂದು ಮಾತ್ರ ಸೂಚಿಸಿದೆ " ಎಂದು ತುಸು ನಕ್ಕು ಅವನೂ ವಿಷಯವನ್ನು ತೇಲಿಸಿದನು. ತುಸು ಹೊತ್ತು ಆ ದಂಪತಿಗಳೊಡನೆ ಕುಳಿತು ಮಾತನಾಡಿ ಪತ್ರಗಳ ಪುಡಿಕೆಯನ್ನು ತೆಗೆದುಕೊಂಡು ನಾನು ಮನೆಗೆ ಮರಳಿದೆನು.

ವನಮಾಲಿಯು ಈ ಪತ್ರಗಳನ್ನು ಬರೆದಿದ್ದು ಹತ್ತು ವರ್ಷಗಳ ಹಿಂದೆ. ಈಗ ಅವನು ಹೆಚ್ಚಿನ ವರ್ಗದ ಅಧಿಕಾರಿಯಾಗಿದ್ದಾನೆ. ಆದರೆ ಕಾಲೇಜಿನಲ್ಲಿ ಕಲಿಯುತ್ತಿರುವಾಗಲೇ ಅವನು ಮದುವೆಯಾದ. ಆಗ ಲಲಿತಾ ಇನ್ನೂ ಚಿಕ್ಕವಳು. ಅದೇ ಮೈನೆರೆತಿದ್ದಳು. ತನ್ನ ಶಿಕ್ಷಣವನ್ನು ಮುಗಿಸಿಕೊಂಡು ಸಂಸಾರರಥವನ್ನು ಹೂಡಬೇಕೆಂದಿದ್ದ ವನಮಾಲಿಯು ಲಲಿತೆಗೆ ಅವಳ ತವರುಮನೆಯಲ್ಲೇ ಅವಳ ಶಿಕ್ಷಣವನ್ನು ಮುಂದೆ ಸಾಗಿಸುವ ಅನುಕೂಲತೆಯನ್ನು ಕಲ್ಪಿಸಿ ಕೊಟ್ಟಿದ್ದ. ಅಲ್ಲದೆ ಇವನ ಒಲವಿನೋಲೆಗಳೂ ಲಲಿತೆಗೆ ಉಚ್ಚ ತರಗತಿಯ ಶಿಕ್ಷಣದ ಹೊಳವನ್ನು ಕೊಡುತ್ತಲಿದ್ದವು. ಆಗ ಲಲಿತೆಯು ವಿಶೇಷವಾಗಿ ಕಲಿತಿರಲಿಲ್ಲ. ಕನ್ನಡ ಐದಾರು ಇಯತ್ತೆಗಳನ್ನು ಮುಗಿಸಿ ಇಂಗ್ಲಿಷು ಕಲಿಯುವ ಹವಣಿಕೆಯಲ್ಲಿದ್ದಳು. ಈಗ ಸಹ ಅವಳ ಮನಸ್ಸು ಇಷ್ಟೊಂದು ಸುಸಂಸ್ಕೃತವಾಗಿದ್ದರೂ ಅವಳು ತನ್ನ ವಿಚಾರಗಳನ್ನು ಬರೆದು ತೋರಿಸುವದಿಲ್ಲ; ಆಗ ವನಮಾಲಿಗೆ ಲಲಿತಾ ತಿರುಗಿ ಬರೆದ ಪತ್ರಗಳನ್ನು ನಾನು ನೋಡಲು ಪ್ರಯತ್ನಿಸಿಲ್ಲ. ಅವು ಹೇಗಿರಬಹುದೆಂಬುದು ಮದುವೆಯಾದವರಿಗೆಲ್ಲ ಗೊತ್ತಿರಲು ಸಾಕು.

ಪತ್ರಗಳನ್ನು ಪ್ರಸಿದ್ಧಿಸುವದು 'ಬದ್ನಾಮಿ' ಯಲ್ಲವೆಂದು ಲಲಿತಾ ವನಮಾಲಿಗೆ ಹೇಳುವಾಗ ನುಡಿದಿದ್ದರು: "ಎರಡು ನಕ್ಷತ್ರಗಳನ್ನು ನೋಡಿರಿ. ! ಆಕಾಶದಲ್ಲಿ ಮಿನುಗಿ ಅವು ಜಗತ್ತಿಗೇ ಕಾಣಿಸಿಕೊಳ್ಳುತ್ತವೆ. ಆದರೂ ಆ ನಕ್ಷತ್ರಗಳು ವಿಜ್ಞಾನಿಗಳಿಗೆ ಸಹ ಅಭೇದ್ಯ ರಹಸ್ಯಗಳಾಗಿವೆ. ಈ

ಪತ್ರಗಳು ಪ್ರಕಟವಾಗುವುದೂ ಹಾಗೆಯೇ. ಅದರಿಂದ ಆದರ್ಶದ ಬೆಳಕು ಬೀಳಬಹುದೇ ಹೊರತು ನಮ್ಮ 'ಅನಾಮಧೇಯ' ತೆಗೆ ಧಕ್ಕೆ ತಗಲಲಾರದು." ಈ ಒಲವಿನೋಲೆಗಳಲ್ಲಿ ಲಲಿತೆಯ ಮನಸ್ಸು ಆಕರ್ಷಿಸಿದ ಧ್ಯೇಯಪೂರ್ಣತೆಯಿದೆ. ತನ್ನ ಅಕ್ಕತಂಗೆಂದಿರಿಗೂ ಇದರ ಪ್ರಯೋಜನವಾಗಲೆಂದು ಲಲಿತಾ ಬಯಸಿದ್ದರಲ್ಲಿ ಏನಾಶ್ಚರ್ಯ?

ಮನೆಗೆ ಹೋಗಿ ಪುಡಿಕೆಯನ್ನು ಬಿಚ್ಚಿ ನೋಡಿದಾಗ ಅದರಲ್ಲಿ ಓಲೆಗಳೊಡನೆ ಕೆಲವು ಪ್ರಬಂಧಗಳೂ ಇರುವುದು ಕಾಡು ಬಂದಿತು. ಎಲ್ಲವನ್ನೂ ಓದಿ ನೋಡಿದೆ. ಒಂದಿಲ್ಲೊಂದು ದಿನ ವನಮಾಲಿ ಹೀಗೆ ಪತ್ರಗಳನ್ನು ಇನ್ನೊಬ್ಬರಿಗೆ ಕೊಟ್ಟು ಬಿಡಬಹುದೆಂದು ಲಲಿತಕ್ಕನಿಗೆ ಹೊಳೆದಿರಬೇಕು! ಅಂತೆಯೇ ಆಕೆ ತೀರ 'ಸ್ವಂತ'ದ ಓಲೆಗಳನ್ನು ತನ್ನ ಹತ್ತಿರ ಇಟ್ಟುಕೊಂಡು ಅವುಗಳ ಬದಲು ವನಮಾಲಿಯ ಪ್ರಬಂಧಗಳನ್ನು ಅಲ್ಲಿ ಸೇರಿಸಿರಬೇಕು! ಆದರೆ ಈ ಎಲ್ಲ ಪತ್ರ-ಪ್ರಬಂಧಗಳಲ್ಲಿಯೂ ಒಂದು ಕ್ರಮವಿತ್ತು. ಆತ್ಮೋನ್ನತಿ ಹಾಗು ಸಮಾಜೋದ್ಧಾರ—ಈ ಎರಡು ಸೂತ್ರಗಳನ್ನು ಹಿಡಿದು ವನಮಾಲಿಯ ಬರೆವಣಿಗೆ ಸಾಗಿದ್ದಿತು. ಓಲೆಗಳನ್ನು ವನಮಾಲಿಯು ಯೌವ್ವನದ ಹೊಸ ಹುರುಪಿನಲ್ಲಿ ಬರೆದಿದ್ದ. ಪ್ರಬಂಧಗಳನ್ನು ಬರೆದದ್ದು ಬಹುಶಃ ಅವನು ಒಂದು ಕೆಲಸವನ್ನು ಹಿಡಿದು ನಿಂತಮೇಲೆ. ಆತ್ಮಪರೀಕ್ಷಣದ ಮನಃಸ್ಥಿತಿಯಲ್ಲಿಯೇ ವನಮಾಲಿ ಆ ಪ್ರಬಂಧಗಳನ್ನು ಬರೆದಿಟ್ಟಿರಬೇಕು.

'ಜೀವನ ಪಾಠಗಳು' ಎಂದು ಅವುಗಳನ್ನೆಲ್ಲ ಸ್ರಂಗಹಿಸಿ ಪ್ರಸಿದ್ಧಿಸಬೇಕೆಂದು ನಿಶ್ಚಯಿಸಿದೆ. ಈ ಪಾಠಗಳು ಪದ್ಯಕಾವ್ಯವಲ್ಲ. ಕಾವ್ಯಮಯತೆಯು ಅಲ್ಲಲ್ಲಿ ತಾನಾಗಿಯೇ ಪ್ರಕಟವಾಗಿದೆ. ಇವುಗಳಲ್ಲಿ ಶಾಸ್ತ್ರೀಯ ತತ್ವಮಂಡನೆಯೂ ಇಲ್ಲ. ಅಂಥ ಕಟ್ಟು ಹಾಗೂ ನುಡಿಯಲ್ಲಿ ಈ ಪಾಠಗಳು ಬಂದಿದ್ದರೆ ಅವು ಲಲಿತಕ್ಕನಿಗೆ ತಿಳಿಯದೆ ಹೋಗುತ್ತಿದ್ದವು. ಕಾವ್ಯ-ತತ್ವಮಂಡನೆಯ 'ದೇಸಿ' ಯನ್ನು ಇಲ್ಲಿ ಕಾಣಬಹುದು. ಲಲಿತಕ್ಕನು ತಿಳಿಯುವಂತಹದನ್ನು ನಾಡ ಎಳೆಯರೂ ತಿಳಿದುಕೊಂಡಾರು. ಈ ಭಾವನೆಯಿಂದ ಈಗ 'ಜೀವನ ಪಾಠ' ಗಳನ್ನು ಪ್ರಸಿದ್ಧಿಸುತ್ತಿದ್ದೇನೆ.

ಶಾಂತಿಕುಟೀರ, ಕೊಲ್ಹಾಪುರ  ವಿ. ಕೃ. ಗೋಕಾಕ

೨೧-೧೦-೪೯

*

# ಓಲೆ (೧) ಮೊದಲಗಿತ್ತಿ

ನನ್ನ ಜೀವದ ಗೆಳತಿ !

ಇದೀಗ ನಮ್ಮ ಉತ್ಸವ. ಈಗ ನೀನು ನನ್ನ ಮನೆಯ ನಂದಾದೀಪವಾದೆ. ನನ್ನ ಗೃಹದೇವತೆಯಾದೆ. ನನ್ನ ಸಹಧರ್ಮಿಣಿಯಾದೆ. ನನ್ನ ಧರ್ಮ-ಕರ್ಮಗಳಲ್ಲಿ ಪಾಲುಗಾರಳಾದೆ. ನನ್ನ ಮನೆತನವನ್ನು ನಿಲ್ಲಿಸುವ ಧ್ವಜಸ್ತಂಭವಾದೆ. ನನ್ನ ಇರುವಿಕೆಯ ಸರ್ವಸ್ವವಾದ ಪ್ರೇಮಯೋಗದ ಗುರಿಯಾದೆ. ಹೆಚ್ಚೇನು ? ನನ್ನ ಜೀವ ಜೀವಾಳವಾದೆ ! ನಾನೇ ನೀನಾಗಿ ಹೋದೆ !

ಎಲ್ಲರ ಜೀವನದ ಗುಟ್ಟನ್ನು ಬಲ್ಲ ದೇವದೇವನು ಇಂದು ನಮ್ಮನ್ನು ಕೂಡಿಸಿದನು. ಎಲ್ಲರಿಗೂ ಜ್ಞಾನವನ್ನೂ ಸುಬುದ್ಧಿಯನ್ನೂ ಕೊಡುವ ಸೃಷ್ಟಿ ನಿಯಾಮಕನು ನಮ್ಮೀರ್ವರನ್ನು ಪತಿ-ಪತ್ನಿಯರನ್ನಾಗಿ ಮಾಡಿದನು ಅವನ ನಿಯಾಮಕತೆಗೂ ಇಚ್ಛೆಗೂ ಕೈಜೋಡಿಸಿ ಬಾಗುವದೇ ನಾವು ಮಾಡತಕ್ಕ ಕಾರ್ಯವಿದೆ. ಅದನ್ನು ನಾವು ಮಾಡಲು ಸಿದ್ಧರಿರಬೇಕು.

ನನ್ನ ಲಗ್ನವೆಂದರೆ ನನಗೊಂದು ದೊಡ್ಡ ಪ್ರಶ್ನೆಯಾಗಿತ್ತು. ಯಾರನ್ನು ಮದುವೆ ಮಾಡಿಕೊಂಡರೆ ನನ್ನ ಸದಾಚಾರವು ಬೆಳೆದು ನನ್ನ ಜೀವನವು ಉದಾತ್ತವಾಗುವದೋ ಎಂಬ ವಿಚಾರವು ಹಗಲಿರುಳು ನನ್ನ ಕಣ್ಣೆದುರಿಗೆ ಕಟ್ಟಿತ್ತು. ಏಕೆಂದರೆ ಓರ್ವ ಮನುಷ್ಯನು ತನ್ನ ಅರ್ಧಾಂಗಿಯ ಸಹಾಯವಿಲ್ಲದೆ ಯಾವ ಕಾರ್ಯವನ್ನು ಮಾಡಲೂ ಸಮರ್ಥನಾಗಲಾರನು. ಅವಳಲ್ಲಿ ಅವನ ಮನಸ್ಸಿನಲ್ಲಿ ಬರುವ ಉದಾತ್ತ ವಿಚಾರಗಳೇ ಸುಳಿದಾಡಿ ಅವನಂತಹ ಸ್ವಭಾವವೇ ಇದ್ದರೆ ಈರ್ವರಲ್ಲಿ ಪೂರ್ಣವಾದ ಸ್ನೇಹಭಾವವು ಬೆಳೆದು ಅವನ ಯೋಗವು ಸಿದ್ಧಿಯನ್ನು ಹೊಂದುವದು. ಇಲ್ಲದಿದ್ದರೆ ಅದು ನಾಶವಾಗುವ ವೇಳೆ ಬರುವದು.

ನನ್ನ ಸ್ವಭಾವವು ನನಗೆ ಪೂರ್ಣವಾಗಿ ಗೊತ್ತಿದೆ. ನಾನು ಯಾರ ಗೋಜಿಗೂ ಹೋಗುವವನಲ್ಲ. ಮಾನವನಾಗಿ ಹುಟ್ಟಿದ ಮೇಲೆ ನರಜನ್ಮದ ಮೂಲವನ್ನು ಗೊತ್ತು ಹಿಡಿಯುವದೇ ಮೂಲಕಾರ್ಯವೆಂದು ನನ್ನ ಅಭಿಪ್ರಾಯ. ಎಲ್ಲರಂತೆ ಸಾವೂ ಒಂದು ದಿನ ತೀರಿಹೋಗಬೇಕೋ, ಇಲ್ಲವೆ ಇರುವತನಕ ಅತಿ ಉಚ್ಚವಾದ ಕಾರ್ಯವೊಂದನ್ನು ಕೈಕೊಂಡು ಅದರಲ್ಲಿ ದೇಹವನ್ನು ಸವೆಸಬೇಕೋ ?

ಹೌದು; ಸವೆಸಬೇಕೆಂದು ಉತ್ತರ ಬರುವದು ನಿಶ್ಚಯ. ನನಗೆ ಇಂಥ ಕಾರ್ಯವೆಂದರೆ ಜನತಾಜನಾರ್ದನನ ಸೇವೆ. ಎಷ್ಟು ಸಂಕಟಗಳು ಬಂದರೂ ಇದನ್ನು ನಾವು ಸಾಗಿಸಿಕೊಂಡು ಹೋಗಬೇಕು. ಹಿಂದುಸ್ತಾನಕ್ಕೆ–ನಮ್ಮ ತಾಯ್ನಾಡಿಗೆ–ನಾವು ಆತ್ಮಾರ್ಪಣವನ್ನು ಮಾಡಲೇಬೇಕು.

ನಮಗೆ ಇನ್ನೂ ಒಂದು ಕಾರ್ಯವಿದೆ ಅದೆಂದರೆ ನಮ್ಮ ತಾಯ್ನಾಡಿಯ ತವರುಮನೆಯಾದ ಕರಿನಾಡನ್ನು ಸಿರಿನಾಡನ್ನಾಗಿ ಮಾಡುವದು; ಕನ್ನಡಿಗರೊಡನೆ ಆದರ್ಶಗಳ ಸವಿಗನಸುಗಳನ್ನು ಕಟ್ಟಿ ಅವುಗಳನ್ನು ಆಚಂದ್ರಾರ್ಕವಾಗಿ ನಿಲ್ಲಿಸುವದು.

ಆದಿರಲಿ, ನಮ್ಮ ಮುಖ್ಯೋದ್ದೇಶವೆಂದರೆ, ಜನತಾಜನಾರ್ದನನ ಸೇವೆಯಾಯಿತಷ್ಟೇ ? ಆದರೆ ಅವನ್ನು ಸಾಧಿಸುವದು ಹೇಗೆ ? ನನ್ನ ಚಿಕ್ಕಂದಿನಿಂದ ಈ ವಿಚಾರಗಳು ನನ್ನ ತಲೆಯಲ್ಲಿ ಬರಹತ್ತಿದವು. **ನಾನು ಮಾಡಬೇಕಾದುದಾದರೂ ಏನು ?** ಇದು ಫಲಿಸುವದು ಹೇಗೆ ?

ಆಗ ನನ್ನೊಡನೆ ಕೂಡಿ ಬೆಳೆದ ಗೆಳೆಯನೊಬ್ಬನು ನನ್ನ ಹೃದಯದೊಲವನ್ನು ತೆರೆದು ದಾರಿ ತೋರಿದನು. 'ಗೆಳೆಯ' ನೆಂದರೆ ಎಲ್ಲರೆನ್ನುವ ಹಾಗೆ ಗೆಳೆಯನಲ್ಲ; ನನ್ನ ಗುರಿ-ನೆಲೆಗಳನ್ನು ಅರಿತು ನನ್ನಂತೆ ದೇವರಲ್ಲಿ ಪ್ರೇಮವನ್ನಿಟ್ಟು ಗೆಳೆತನವೆಂದರೆ ಪ್ರೇಮಯೋಗವನ್ನಾಗಿ ಮಾಡಿದಾತ. ಅವನಲ್ಲಿಯೇ ನನ್ನ ಪ್ರೇಮದ ಸಸಿಯು ಹುಟ್ಟಿ ಬೆಳೆದು ಎಲೆ ಬಿಟ್ಟು ಹಣ್ಣುಕಾಯಾಗಿ,–ಈಗ ನೀನು ಅದರ ಫಲವನ್ನು ತಿನ್ನುತ್ತಿರುವೆ! ನಮ್ಮಲ್ಲಿ ಯಾವ ತರಹದ ಭೇದವೂ ಇಲ್ಲ. ಜೀವನದ ನಿಜವಾದ ರಹಸ್ಯವನ್ನು ತಿಳಿದುಕೊಳ್ಳಲು ಸಾಗಿದವರಿಗೆ ಎಲ್ಲಿದೆ ಭೇದ ?

ಆದರೆ ಗೆಳೆಯರು ಕಡೆತನಕ ಕೂಡಿರುವದು ಶಕ್ಯವಾದ ಮಾತಲ್ಲ. ಕೂಡಿದ್ದರೆ–ಇರುವ ಹಾಗಿದ್ದರೆ-ಎಷ್ಟು ಚೆನ್ನಾಗಿತ್ತು! ನಮ್ಮೀರ್ವರ ಸ್ವಭಾವ ಧ್ಯೇಯಗಳು ಒಂದೆಯಾದುದರಿಂದ ಇನ್ನು ಯಾರ ಅವಶ್ಯಕತೆಯೂ ನಮಗೆ ಬೀಳುತ್ತಿರಲಿಲ್ಲ. ಆದರೆ ಅದು ಶಕ್ಯವಿಲ್ಲ. ಈಗ ನೀನು ನಿನ್ನ ಗೆಳತಿಯರನು ಬಿಟ್ಟು ನನ್ನೊಡನೆ ಇರಬೇಕಾಯಿತಲ್ಲವೆ ? ಅಂದಮೇಲೆ ನಮ್ಮೊಡನೆ ಹಗಲಿರುಳು ಕೂಡಿದ್ದು ನಮ್ಮ ಸುಖ-ದುಃಖಗಳ ಪಾಲುಗಾರರಾಗುವವರು ಯಾರು ? ನಾನು ಮತ್ತು ನೀನು. ಬೇರೆ ಯಾರೂ ಆಗಲಾರರು.

ಆಗ ನನಗೆ ಮದುವೆಯ ಪ್ರಶ್ನೆಯು ಬಿತ್ತು. ನನ್ನಂತಹ ಸ್ವಭಾವವಿದ್ದ ಹೆಣ್ಣುಮಕ್ಕಳು ಸಿಗುವದೆಲ್ಲಿ ? ನನ್ನ ಪ್ರೇಮವನ್ನು ಮನ್ನಿಸಿ ಗೆಳೆಯನಂತೆ ನನ್ನನ್ನು ಪ್ರೀತಿಸುವವರು ಇನ್ನೆಲ್ಲಿ ಸಿಗಬಹುದು ? ಅಯ್ಯೋ! ಎಂದು ಕೊರಗಿದೆ. ಹೆಣ್ಣುಮಕ್ಕಳೊಡನೆ ನಾವು ಮಾತನಾಡುವ ಹಾಗೆ ಕೂಡ ಇಲ್ಲ. ನಮ್ಮ ಸಮಾಜದ ತರಹವೇ ಬೇರೆ. ಅಂದಮೇಲೆ ಮಾಡುವದೇನು ? ಎಂಥ ಹುಡುಗೆಯನ್ನು ಲಗ್ನವಾಗಬೇಕು ? ದೊಡ್ಡ ದೊಡ್ಡ ವಿಚಾರಗಳನ್ನು ಅವಳ ಕಣ್ಣೆದುರಿಗಿಡಲು ಅವಳು ಕಲಿತವಳಿರಬೇಕಷ್ಟೇ ? 'ಕನ್ನಡ'ವಂತೂ ಚೆನ್ನಾಗಿ ಬರಲೇ ಬೇಕು. ಇಂಗ್ಲಿಷ ಭಾಷೆಯಲ್ಲಿಯೂ ಚೆನ್ನಾಗಿ ಜ್ಞಾನವಿರಬೇಕು. ಅಂದರೆ ನನ್ನ ಮನಸ್ಸನ್ನು ಪವಿತ್ರವಾಗಿ ಮಾಡಿದ ಗ್ರಂಥಗಳನ್ನು ಅವಳೊಡನೆ ಓದುವುದು ಸಾಧಿಸುವದು. ಇವೇ ಮೊದಲಾದ ವಿಚಾರಗಳು ನನ್ನ ಮನಸ್ಸಿನಲ್ಲಿ ಸುಳಿದಾಡಹತ್ತಿದವು.

ಈ ರೀತಿಯಾಗಿ ನನ್ನ ಕೈಹಿಡಿಯಲು ಬಂದ ಅನೇಕ ಹುಡುಗೆಯರಲ್ಲಿ ಇಂಗ್ಲಿಷ ಕಲಿತವರು ಕೆಲವರಿದ್ದರು. ಆದರೆ ಅವರಲ್ಲಿ ಯಾರೂ ನನಗೆ ಸರಿಬರಲಿಲ್ಲ. ಕೆಲವೆಡೆ ಯೋಗಾಯೋಗವಿರಲಿಲ್ಲ. ನೀನು ನನ್ನನ್ನು ಲಗ್ನವಾಗುವದು ದೇವರ ಸಂಕಲ್ಪವಿದ್ದಾಗ ನಾನು ಉಳಿದವರನ್ನು ಮದುವೆಯಾಗುವದು ಹೇಗೆ ?

ನೀನು ಕಲಿತವಳೆಂದು ನಾನು ನಿನ್ನನ್ನು ಆರಿಸಲಿಲ್ಲ ನಿನಗಿಂತ ಹೆಚ್ಚು ಕಲಿತ ಅನೇಕ ಹುಡುಗೆಯರು ನನಗೆ ಬಂದಿದ್ದರು. ನಾನು ನಿನ್ನ ರೂಪಕ್ಕಾಗಿ ಮನಸೋತವನಲ್ಲ. ನಿನಗಿಂತ ಚೆಲುವೆಯರಾದ ಅನೇಕ ಹುಡುಗೆಯರಲ್ಲೊಬ್ಬಳನ್ನು ನಾನು ಮದುವೆಯಾಗಬಹುದಾಗಿತ್ತು. ಆದರೆ ನಾನ-

ಆದರೆ ನಾನು ನಿನ್ನನ್ನೇ ಲಗ್ನವಾದುದರ ರಹಸ್ಯವೇನೆಂದು ಕೇಳು ವಿಯಾ ?

ನಿನ್ನನ್ನು ನೋಡಿದಾಗಲೆ ನನ್ನ ಸ್ವಭಾವಕ್ಕನುರೂಪವಾದ ಸ್ವಭಾವವು ನಿನ್ನಲ್ಲಿದೆಯೆಂದು ನನಗೆನಿಸಿತು. ನನಗೆ ಬೇಕಾದ ಸುಶೀಲತೆಯು ನಿನ್ನಲ್ಲಿದೆಯೆಂದು ನನಗೆ ಹೊಳೆಯಿತು. ನನಗೆ ಮುಖ್ಯವಾಗಿ ಬೇಕಾಗಿದ್ದು ಪ್ರೇಮ. ಆ ಪ್ರೇಮವನ್ನು ಕೊಡಲು ನೀನು ಸಮರ್ಥಳಿರುವಿಯೆಂದು ನನಗೆ ಆಗಲೇ ಮನವರಿಕೆಯಾಯಿತು. ನನ್ನ ಜೀವನಕ್ಕೆ ಬೇಕಾದ ಸ್ಫೂರ್ತಿ ನಿನ್ನಲ್ಲಿದೆ; ದೇವನ ಸೇವೆಯನ್ನೂ ದೇಶಸೇವೆಯನ್ನೂ ನಾನು ಮಾಡುವಾಗ ನೀನೂ ನನ್ನನ್ನು ಮನಃಪೂರ್ವಕವಾಗಿ ಹಿಂಬಾಲಿಸುವಿಯೆಂದೂ ನನಗೆನಿಸಿದ್ದರಿಂದಲೇ ನಾನು ನಿನ್ನನ್ನು ಮದುವೆಯಾದೆನು. ಇದನ್ನು ಬಿಟ್ಟು ಇನ್ನು ಬೇರೆ ಯಾವ ಕಾರಣವೂ ಇಲ್ಲ. ನೀನು ನನ್ನನ್ನು ಏನೆಂದು ಮದುವೆಯಾದೆ? ನಮ್ಮ ಮನೆಗೆ ಬಂದ ಮೇಲೆ ಹೇಳುವಿಯಂತೆ !

ನೀನು ಮರಾಠಿ ಒಗಟನ್ನು ಹಾಕಿದಾಗ—

ಕನ್ನಡ ಭಾಷೆಯು ನಮ್ಮ ಭಾಷೆ. ಕನ್ನಡದಲ್ಲಿ ನನಗೆ ಅಭಿಮಾನ ಹೆಚ್ಚು. ಕನ್ನಡದ ಸಲುವಾಗಿ ಒಗಟದ ಹೊತ್ತಿಗೆ–ನಾನು ನಿನಗೆ ಕೊಟ್ಟ ತ್ರಾಸಿನ ಮೇಲಿಂದ ನಿನಗೆ ಇದು ಗೊತ್ತಾಗಿರಬಹುದು. ನಿನಗೆ ತ್ರಾಸ ಕೊಡಬೇಕೆಂದು ನಾನು ಹಾಗೆ ಮಾಡಲಿಲ್ಲ; ಆದರೆ ನಿನ್ನಲ್ಲಿಯೂ ಕನ್ನಡದ ವಿಷಯಕ್ಕೆ ಪ್ರೀತಿ ಹೆಚ್ಚಲೆಂದು ನಾನು ಹಾಗೆ ಮಾಡಿದೆ; ಈಗ ನಿನಗೆ ಇಂಗ್ಲೀಷು ಕಲಿಸುವ ವ್ಯವಸ್ಥೆಯನ್ನುಮಾಡಿದ್ದೇನೆ; ಅದಾದರೂ ಏತಕ್ಕೆಂದು ತಿಳಿದಿರುವಿ? ನನ್ನ ಸಂಸ್ಕೃತಿಯು—ಅಂದರೆ ಮನಸ್ಸಿನ ಸುಧಾರಣೆಯು ಇಂಗ್ಲೀಷಿನಿಂದಲೇ ಹೆಚ್ಚಿತು. ಅದರಂತೆ ನಿನಗಾದರೂ ಆಗಬೇಕೆಂದು ನನ್ನ ಆಶೆ. ನಾನು ಹೇಗೋ ಹಾಗೆ ನೀನಾದರೂ ಆಗಬೇಕು. ನಾನು ಹೇಗೆ ಜಗತ್ತಿನಲ್ಲಿ ವರ್ತಿಸುವೆನೋ ಅದರಂತೆ ನೀನಾದರೂ ವರ್ತಿಸಬೇಕು. ನನ್ನ ಸ್ವಭಾವವು ಹೇಗೋ ಅದರಂತೆ ನಿನ್ನ ಸ್ವಭಾವವಾಗಬೇಕು. ನೀನು ನಾನೇ ಆಗಬೇಕು. ಇದು ನನ್ನ ಜೀವಿತದ ಮುಖ್ಯ ಆಕಾಂಕ್ಷೆ. ಅದು ಸಫಲವಾಯಿತೆಂದರೆ ನನ್ನನ್ನು ಹಿಡಿದವರಿಲ್ಲ. ಆದರಿಂದ ನನ್ನ ಆತ್ಮೋನ್ನತಿಯೂ ನಿನ್ನ ಆತ್ಮೋನ್ನತಿಯೂ ಆಗುವದಲ್ಲದೆ ನನ್ನಿಂದ ಆದರ್ಶದ ಸುರಿಮಳೆಯಾಗುವುದು !

ಏಕೆಂದರೆ ಪತ್ನಿಯಿಂದಲೇ ಪತಿಯು ಜೀವನದ ಉದ್ಧಾರವಾಗುವದು. ಅವಳಿಂದಲೇ ಅವನ ಎಲ್ಲ ಇಚ್ಛೆಗಳು ಪೂರ್ಣವಾಗುವವು. ಪತ್ನಿಯೆಂದರೆ ಅವನ ಮನೆಯ ಕುಲದೇವತೆ. ಅವನ ಮನೆಯನ್ನು ಸ್ವರ್ಗವನ್ನಾಗಿ ಮಾಡುವವಳು. ಅವಳು ಅವನ ಮನಸ್ಸಿಗೆ ತಕ್ಕ ಹಾಗೆ ಇಲ್ಲದೆ ಹೋದರೆ ಅವನ ಜನ್ಮವು ನರಕಕ್ಕಿಂತ ಕಡೆ. ಇಲ್ಲಿ ಒಂದು ಕವಿತೆಯು ನೆನಪಾಗುತ್ತಿದೆ. ಅದು ದೇವರಿಗೆ ಮಾಡಿದ ಒಂದು ಪ್ರಾರ್ಥನೆ. ಅದರಲ್ಲಿ ಈ ಸಾಲಿದೆ. 'ನನಗೆ **ದಾಸಿಯು ಬೇಡ; ಸಹಧರ್ಮಿಣಿಯು** ನೀಡು.' ಹೆಂಡತಿಯೆಂದರೆ ದಾಸಿಯಲ್ಲ. ಮನೆಯಲ್ಲಿ ಎಲ್ಲ ಕೆಲಸವನ್ನು ಮಾಡಲು ಇಟ್ಟ ಕೂಲಿಯ ಆಳಲ್ಲ. ಮನುಷ್ಯನ ವಿಷಯ—ವಾಸನೆಯನ್ನು ತೃಪ್ತಿಗೊಳಿಸಲು ದೇವರು ಮಾಡಿಟ್ಟ ಗೊಂಬೆಯಲ್ಲ. ಅವಳು **ಸಹಧರ್ಮಿಣಿಯು**. ಗಂಡನನ್ನು ಕೂಡಿಕೊಂಡು ಧರ್ಮದ ಕಾರ್ಯವನ್ನು ಕೈಕೊಳ್ಳುವವಳು. ಗಂಡನಲ್ಲಿ ದೇವರ ವಿಷಯಕ್ಕೆ ಪ್ರೇಮ ವಿಶ್ವಾಸಗಳನ್ನು ಹುಟ್ಟಿಸಿ ತಾನೂ ಅದೇ ಮಾರ್ಗದಲ್ಲಿ ನಡೆಯತಕ್ಕವಳು. ಪ್ರತಿಕ್ಷಣಕ್ಕೆ ಗಂಡನನ್ನು ತನ್ನ ಪ್ರೇಮದಿಂದ ಪಾಲಿಸಿ ಅದೇ ಪ್ರೇಮವನ್ನೇ ದೇವರಲ್ಲಿರಿಸಿ ಗಂಡನು ಆ ಹಾದಿಯನ್ನು ಬಿಡದ ಹಾಗೆ ನೋಡಿಕೊಳ್ಳುವವಳು. ಪ್ರೀತಿಯಂಥ ವಸ್ತುವು ಜಗತ್ತಿನಲ್ಲಿ ಇನ್ನಾವುದೂ ಇಲ್ಲ.

> **"ರೀತಿ ಭೀತಿಯ ಮೀರಿ ನಿಂತ ಪ್ರೀತಿ**
> **ಅದು ದೇವನಿತ್ತ ಕಾಣಿಕೆಯು ಗೆಳತಿ !"**

ಇನ್ನೊಂದು ಕವಿತೆಯಲ್ಲಿ ಈ ನಾಲ್ಕು ಸಾಲುಗಳಿವೆ.

> **"ಸಕಲವನು ನಿನಗೀವೆ ಮಾನಸದ ಚಂದ್ರನನು**
> **ಆಗಸದಿ ಹೊಳೆ ಹೊಳೆವ ತಾರೆಗಳನು !**
> **ಜನಿಸಿ ಬರೆ ನಿನ್ನಲ್ಲಿ ನನ್ನರಿವಿನಂಕುರವು,**
> **ಮೀರಿ ಬರೆ ನಿನ್ನೊಲವು ಮೇರೆಗಳನು !"**

ಅಂದರೆ—ನಾನು ನಿನಗೆ ಎಲ್ಲವನ್ನೂ ಕೊಡುವೆನು. ಆಕಾಶದಲ್ಲಿರುವ ಚಂದ್ರನನ್ನೂ ತಾರೆಗಳನ್ನೂ ಸಹ ತಂದು ಕೊಡುವೆನು. ಆದರೆ ದೇವನಲ್ಲಿ ನೀನು ಪ್ರೇಮವನ್ನಿರಿಸಬೇಕು. ಅವನ ಅಗಾಧ ಮಹಿಮೆಯ ಜ್ಞಾನವು ನಿನ್ನಲ್ಲಿ ಹುಟ್ಟಬರಬೇಕು. ಹಾಗು ನಿನ್ನ ಪ್ರೀತಿಯು ಬರಿಯ ದೇಹ-ವಿಕಾರವನ್ನು ಮೀರಿ ಪವಿತ್ರವಾದ ನಿರ್ಮಲವಾದ ಆತ್ಮಗುಣವಾಗಿ ಹರಿದು ಬರಬೇಕು.

ಈ ಪ್ರೀತಿಯೆಂದರೆ ಏನೆಂದು ಕೇಳುವಿಯಾ ? ಅದು ಸಹಜವಾಗಿರುವದು. ತನ್ನಷ್ಟಕ್ಕೆ ತಾನೆ ಮನಸ್ಸಿನಲ್ಲಿ ಹುಟ್ಟಿಬರುವದು. ಈಗ ನೀನು ನಿನ್ನ ತಾಯಿಯನ್ನು ಪ್ರೀತಿಸುವದಿಲ್ಲವೆ ? ಯಾವುದಾದರೊಂದು ಸುಂದರವಾದ ವಸ್ತುವನ್ನೂ ಹೂವನ್ನೂ ಮನೋಹರವಾದ ನೋಟವನ್ನೂ ಪ್ರೀತಿಸುವದಿಲ್ಲವೆ ? ಬೆಳದಿಂಗಳು ಬಿದ್ದ ಕೂಡಲೆ ನಿನ್ನ ಮನಸ್ಸಿನಲ್ಲಿ ಆನಂದವಾಗುವದಿಲ್ಲವೆ ? ಆದರಂತೆ ದೇವಾಂಶವೇ ಆದ ಒಂದು ಆತ್ಮವನ್ನು—ಅಂದರೆ ಜೀವವನ್ನು ನೋಡಿ ಮನಸ್ಸಿನಲ್ಲಿ ಸಹಜವಾಗಿ ಉತ್ಪನ್ನವಾಗುವ ಉದ್ರೇಕಕ್ಕೆ-ಅಂದರೆ ಸಂತೋಷಕ್ಕೆ-ಪ್ರೀತಿಯೆನ್ನುತ್ತಾರೆ. ಈಗ ನಾನು ನಿಮ್ಮ ಮನೆಗೆ ಬಂದರೆ ನಿನಗೆ ಸಂತೋಷವಾಗುವದಿಲ್ಲವೆ ? ಅದೇಕಾಗುವದು ? ನಿನ್ನಲ್ಲಿ ನನ್ನ ವಿಷಯಕ್ಕೆ ಪ್ರೀತಿಯಿರುವದೆಂದು !

ಇದೀಗ ಕಠಿಣ ಪ್ರಶ್ನೆಗಳನ್ನು ಕಣ್ಣೆದುರಿಗಿಟ್ಟುಕೊಂಡು ನಿನ್ನನ್ನು ಹೆದರಿಸುವ ಇಚ್ಛೆಯಿಲ್ಲ ನನಗೆ ! ಇನ್ನೊಂದು ಪತ್ರ ಬರೆದಾಗ ಮತ್ತೆ ವಿಷಯವನ್ನು ಮುಂದುವರಿಸುತ್ತೇನೆ. ನಾನು ಊರಿಂದ ಹೊರಟಾಗ ಕೋಣೆಯಲ್ಲಿ ಅರೆಕ್ಷಣ ನಿಂತು ನಾವು ಮೌನವಾಗಿ ಮಾತನಾಡಿದೆವು. ಅದಕ್ಕಾಗಿ ನಾನು ಹೋದಮೇಲೆ ಅವ್ವನು ನಿನಗೇನಾದರೂ ಅಂದಳೇನು ? ಅಂದಿರಬಹುದು ! ಆದರೆ ಇದರ ಬಗ್ಗೆ ಆಕ್ಷೇಪಣೆಗಳು ನಿನ್ನ ತವರುಮನೆಯಲ್ಲಿ ತಲೆಯೆತ್ತಲಾರವು. ನೀನು ನಮ್ಮ ಮನೆಗೆ ಬಂದ ಮೇಲೆ ಮಾತ್ರ ಸನ್ನೆ-ಸೂಕ್ಷ್ಮಗಳನ್ನು ಹೆಚ್ಚಾಗಿ ಕಲಿಯಬೇಕು.

ನಿನ್ನೊಲವಿನ,

**ವನಮಾಲಿ**

# ಓಲೆ (೨) ದೇವ-ಜೀವ

ನನ್ನ ಜೀವದ ಗೆಳತಿ,

ನಾನು ಅಭ್ಯಾಸಕ್ಕೆ ಕುಳಿತ ಕೋಣೆಯಲ್ಲಿ ನೀನು ಸುಳಿಯುತ್ತಿರುವೆ. ನಾನು ತಿರುಗಾಡಲು ಹೋದಾಗ ಮೆಲ್ಲನೆ ಬಂದು ಸೋಂಕುವ ತಣ್ಣೆಲರಿನಲ್ಲಿ ನಿನ್ನ ಉಸಿರನ್ನು ತೇಲಿಸುತ್ತಿರುವೆ. ನನ್ನ ಕನಸಿನಲ್ಲಿ ಮನೆಮಾಡಿಕೊಂಡಿ ರುವೆ. ನನ್ನ ಇಂದಿನ ಅಭ್ಯಾಸಕ್ರಮದ ಮೇಲೆ ನನ್ನ ಮುಂದಿನ ಜೀವನದ ಆರ್ಥಿಕ ಸ್ವಯಂಪೂರ್ಣತೆಯು ನಿಂತಿರದಿದ್ದರೆ ಅದೆಂದಿಗೋ ನೀನಿದ್ದಲ್ಲಿಗೆ ಬಂದು ಆತ್ಮವಿನೋದದಲ್ಲಿ ಕಾಲಕಳೆಯುತ್ತಿದ್ದೆ! ಈಗ ಉಕ್ಕಿ ಬರುತ್ತಿರುವ ಲಹರಿಗಳನ್ನೆಲ್ಲ ಪತ್ರಗಳಲ್ಲಿ ತುಂಬಿಕೊಳ್ಳಬೇಕಾಗಿದೆ.

'ಪ್ರೀತಿಯೆಂದರೇನು?' ಎಂಬ ತಾತ್ವಿಕ ಪ್ರಶ್ನೆಯನ್ನೇ ನನ್ನ ಹಿಂದಿನ ಪತ್ರದಲ್ಲಿ ಕೇಳಿದ್ದೆ. ಇದನ್ನು ವಿಚಾರಿಸುವದಕ್ಕಿಂತ ಮೊದಲು ಪ್ರೀತಿಸಲು ಪ್ರಯತ್ನಿಸುವ ನಾವು ಯಾರೆಂಬುದನ್ನು ಸ್ಪಷ್ಟವಾಗಿ ತಿಳಿಯೋಣ.

ನಾನೆಂದರೆ ಯಾರು? ನನ್ನ ದೇಹವೇನು? ಅಲ್ಲ! ಅದು ನನ್ನ ದೇಹ. ನನ್ನ ದೇಹಕ್ಕೆ ಯಾರೂ 'ವನಮಾಲಿ'ಯೆನ್ನುವದಿಲ್ಲ. ಹಾಗಾದರೆ ನಾನೆಂದರೆ ಮನಸ್ಸೇನು? ಅಲ್ಲ! ಅದು ನನ್ನ ಮನಸ್ಸು! ಅಂದಮೇಲೆ 'ನಾನೆಂದ'ರಾದರೂ ಯಾರೂ?

ಉತ್ತರವಿಷ್ಟೇ: ನಾನೆಂದರೆ ಒಂದು **ಜೀವ**. ದೇವರು ಸೃಷ್ಟಿಕರ್ತನು; ಈ ಲೋಕವನ್ನೂ ಚಂದ್ರನನ್ನೂ ಸೂರ್ಯನನ್ನೂ ತಾರೆಗಳನ್ನೂ ಆಕಾಶವನ್ನೂ ಜನರನ್ನೂ ಪಶುಗಳನ್ನೂ ಆತನು ನಿರ್ಮಿಸಿರುವನು. ಆತನಿಗೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ. ಆತನು **ಅಮರನು**. ಎಷ್ಟೋ ಕೋಟಿ ವರ್ಷಗಳಿಂದ ಇರುತ್ತ ಬಂದಿರುವನು; ಇನ್ನೂ ಎಷ್ಟೋ ಕೋಟಿ ವರ್ಷ ಇರುವನು. ನಾವೆ ಲ್ಲರೂ ಹುಟ್ಟಿ ಸತ್ತು ಹೋದರೂ ಆತನ ಕಾರ್ಯವು ಸಾಗಿಯೇ ಇರುವದು. ಈ ದೇವನಿಗೆ ರೂಪವಿದೆಯೋ ಎಂದು ನೀನು ಕೇಳಬಹುದು. ಆತನಿಗೆ ರೂಪ ವಿದೆ; ರೂಪವಿಲ್ಲ ಎಂದು ಹೇಳಬಹುದು. ಕಣ್ಣಿಗೆ ಕಾಣುವ ಈ ವಿಶ್ವವನ್ನೆಲ್ಲ

ನಿರ್ಮಿಸಿದ ಆತ ಆದರಾಚೆಗೆ ನೆಲೆಸಿರುವನು. ಎಲ್ಲ ನಕ್ಷತ್ರಗಳಿಗೂ ಬೆಳಕನು ಕೊಟ್ಟ ಆತನು ಅವುಗಳ ರಾಜ್ಯವನ್ನು ದಾಟಿ ಆಚೆಗೆ ಇರುವನು. ಒಂದು ಮೈಲು ನೆಲವೇ ನಮ್ಮ ಕಣ್ಣಿಗೆ ಕಾಣದು; ಅಂದಮೇಲೆ ಆತನ ವಿಶ್ವರೂಪವು ನಮಗೆ ಕಾಣುವದೆಂತು ? ಇಂಥ ದೇವಾಧಿದೇವನಲ್ಲಿ ಕೋಟಿ ಪ್ರಾಣಿಗಳು ಹುಟ್ಟಿ ಕೋಟಿ ಪ್ರಾಣಿಗಳು ನಾಶಹೊಂದುವವು. ಆದರೂ ಅವನು ಇದ್ದ ಹಾಗೆ ಇದ್ದೇ ಇರುವನು. ಅವನಲ್ಲಿ ಭೇದವಿಲ್ಲ; ವೈರತ್ವವಿಲ್ಲ. ನಮ್ಮೆಲ್ಲರನ್ನೂ ಹುಟ್ಟಿಸಿದ ಅವನಿಗೆ ನಾವೆಲ್ಲರೂ ಮಕ್ಕಳೇ !

ಈ ದೇವನು ನಮ್ಮ ಜೀವಗಳಂಥ ಲಕ್ಷೋಪಲಕ್ಷ ಜೀವಗಳು ಕೂಡಿರುವ ಬೆಳಕು. ನಮಗಿದ್ದಂತೆ ಅವನಿಗೂ ಬುದ್ಧಿಯಿದೆ; ನಮ್ಮ ಬುದ್ಧಿಯು ಎಳ್ಳಿನಷ್ಟಿದ್ದರೆ ಆವನದು ಗಣನೆಯನ್ನು ಮೀರುವಷ್ಟು ದೊಡ್ಡದಿದೆ. ನಮಗಿರುವಂತೆ ಅವನಿಗೆ ದೇಹವಿದೆ. ಕಣ್ಣಿಗೆ ಕಾಣುವ ವಿಶ್ವವೇ ಅವನ ದೇಹ. ಸೂರ್ಯ-ಚಂದ್ರರೇ ಅವನ ಕಣ್ಣುಗಳು. ಆಕಾಶವೇ ಅವನ ಮನಸ್ಸು. ಇದರಂತೆ ಮನಸ್ಸಿಗೆ ತಿಳಿಯಲು ಅತಿ ಕಠಿಣವಾಗಿ ದೇವನಿರುವನು.

ಹಾಗಾದರೆ ಈ ದೇಹವನ್ನು ಕಾಣುವದೆಂತು ? ಅವನು ನಮ್ಮ ಕಣ್ಣಿಗೆ ಕಾಣುವದಿಲ್ಲವೆಂಬುದು ನಿಜ. ಆದರೆ ಅವನ ಸ್ವರೂಪವನ್ನು ತಿಳಿದುಕೊಳ್ಳಲು ಒಂದೇ ಹಾದಿಯಿದೆ ಅದಾವುದೆಂದರೆ-ಪ್ರೀತಿ ಅಥವಾ **ಪ್ರೇಮ.** ಈಗ ನೀನು ನಿನ್ನ ತಂದೆಯನ್ನು-ತಾಯಿಯನ್ನು-ಪ್ರೀತಿಸುವೆ. ದೇವರು ಎಲ್ಲ ಮನುಷ್ಯರ ತಂದೆ. ಆತನಲ್ಲಿ ಪ್ರೀತಿಯು ನಮಗೆ ಸಹಜವಾಗಿ ಉತ್ಪನ್ನವಾಗುವದು. ಈ ಪ್ರೀತಿಯಿಂದಲೇ ಆತನ ನಿಜ ರೂಪವು ತಿಳಿಯುವದು. ಮೇಲೆ ಹೇಳಿದಂತೆ ಆ ದೇವರನ್ನು ತಿಳಿಯುವದೆಂದರೆ ಆತನ ದೇಹವನ್ನಾಗಲಿ ಇಲ್ಲವೆ ಮನಸ್ಸನ್ನಾಗಲಿ ತಿಳಿಯುವದಲ್ಲ. ಆದರೆ ಆತನ ತಿರುಳನ್ನು ಮತ್ತು ಜೀವವನ್ನು-ಅಂದರೆ ಎಲ್ಲವನ್ನೂ-ತಿಳಿಯುವದು. ಇನ್ನು 'ವನಮಾಲಿ' ಎಂದರೆ ಯಾರೆಂಬ ಪ್ರಶ್ನೆಗೆ ಉತ್ತರ ಸಿಗುವದಿಲ್ಲವೆ ? ವಿಶ್ವಚೈತನ್ಯನಾದ ದೇವರಿಂದ ಹುಟ್ಟಿದ ನಾವು ಅವನಂತೆ ಮರಣರಹಿತರು. 'ವನಮಾಲಿ' ಯೆಂದರೆ 'ವನಮಾಲಿ'ಯೆಂಬ ತಾತ್ಪೂರ್ತಿಕವಾದ ಹೆಸರಿನ ಆತ್ಮ ಅಥವಾ ತುದಿ ಮೊದಲಿಲ್ಲದ ಆಕಾರವುಳ್ಳ ದೇವರಿಂದ ಒಡೆದು ಬಂದ ಕಣ. ದೇವರಿಗೆ ಹೇಗೆ

ಮರಣವೂ ಜನನವೂ ಇಲ್ಲವೋ ಅದರಂತೆ ದೇವರ ಒಂದು ಭಾಗವಾದ ಆ ಕಣಕ್ಕೂ ಇಲ್ಲ.

ಅಂದರೆ ನಾವು ಹುಟ್ಟುವದು ಹಾಗು ಸಾಯುವದು ಸುಳ್ಳೇನೆಂದು ನೀನು ಕೇಳಬಹುದು. ಅದು ಸುಳ್ಳಲ್ಲ, ನಿಜವಿದೆ. ಆದರೆ ಹುಟ್ಟಿದ ಆ ಆತ್ಮವು ಸಾವಿಲ್ಲದೆ ಇರುವದು. ದೇವನ ಇಚ್ಛೆಯನ್ನು ಪೂರ್ಣಗೊಳಿಸಲು ಆ ಆತ್ಮವು—ಅಂದರೆ ದೇವರ ಒಂದು ಭಾಗವಾದ ಆ ಕಣವು—ದೇಹವನ್ನು ಧರಿಸಿ ತಾಯಿಯ ಉದರದಿಂದ ಈ ಜಗತ್ತಿನಲ್ಲಿ ಜನಿಸಿ ಬರುವದು. ಮತ್ತೆ ಮನಸ್ಸಿಗೆ ಬಂದಾಗ ತಾನು ಧರಿಸಿದ ದೇಹವನ್ನೂ ಬಿಟ್ಟು ಪರಮಾತ್ಮನಲ್ಲಿ ಲಯವಾಗುವದು. ಮನುಷ್ಯನ ನಿಜಸ್ವರೂಪವೆಂದರೆ ಈ ಆತ್ಮವೇ ಸರಿ.

ಆದರೆ ಯಾವಾಗಲೂ ಮನುಷ್ಯನಿಗೆ ತನ್ನ ಆತ್ಮದ ತಿಳುವಳಿಕೆಯಿರುವದಿಲ್ಲ. ಪ್ರಪಂಚದಲ್ಲಿ ಮುಳುಗಿ ಆತನು ತನ್ನ ನಿಜಸ್ವರೂಪವನ್ನು ಮರೆತು ಬಿಡುವನು. 'ನಾನು' ಎಂದರೆ ಜನನ-ಮರಣವಿಲ್ಲದ ದೇವರ ಒಂದು ಕಣ-ಅಂದರೆ ಆತ್ಮ-ವೆಂದು ತಿಳಿಯದೆ 'ನಾನು' ಇಂಥವರ ಮಗನು-ಇಷ್ಟು ಕಲಿತವನು—ಎಂದು ತಿಳಿದುಕೊಳ್ಳುವನು. ತನ್ನ ದೈವಿಕ ಸ್ವರೂಪವನ್ನು ಅವನು ಪೂರ್ಣವಾಗಿ ಮರೆತು ತನ್ನ ದೇಹಕ್ಕಾದ ನೋವು ತನಗೇ ಬಂದಿದೆ ಎಂದು ತಿಳಿದುಕೊಂಡು ಗೋಳಾಡುವನು. ಆದರೆ ಆತ್ಮಕ್ಕೆ ತೊಂದರೆ ಇದೆಯೇ? ಜನ್ಮವೂ, ಮರಣವೂ ಇಲ್ಲದ ಆತ್ಮಕ್ಕೆ ತೊಂದರೆಯೆಲ್ಲಿ? ಅಂದರೆ ಅದರ ಅರ್ಥವಿಷ್ಟೆ: 'ನಾನು'—ಅಥವಾ 'ಅಹಂ'—ಎಂಬುದರ ಅಹಂಕಾರವನ್ನು ಮನುಷ್ಯನು ಒಮ್ಮೆ ಹಿಡಿದನೆಂದರೆ ಅವನು ಅನೇಕ ದುಃಖಗಳನ್ನು ಅನುಭವಿಸಹತ್ತುವನು. ಆತ್ಮದ ಸಲುವಾಗಿ 'ನಾನು' ಎಂಬ ವಸ್ತುವಿರುವದೇ ಹೊರತು 'ನಾನು' ಎಂಬುದರ ಸಲುವಾಗಿ ಆತ್ಮವಿರುವದಿಲ್ಲ. ಈಗ ಉದಾಹರಣೆಗಾಗಿ ಇಂಥ ಒಬ್ಬ ಮನುಷ್ಯನು ತೀರಿಕೊಂಡನೆಂದು ತಿಳಿಯುವಾ. ಅವನು ಸತ್ತನೆಂದರೇನು? ಇಷ್ಟು ದಿನಗಳವರೆಗೆ ತಾನು ವಾಸಿಸಿದ್ದ ದೇಹವನ್ನು ಆ ಆತ್ಮವು ಬಿಟ್ಟು ಹೋಯಿತು. ಇಲ್ಲಿಯವರೆಗೆ ಅದು ತನಗಿರಲಿಕ್ಕೆ ಅವಶ್ಯವಾದ ಸಂಬಂಧವನ್ನು ಬೆಳೆಸಿತ್ತು. ಆದರೆ ಈಗ ಅವುಗಳನ್ನು ಕಡಿದು ತನ್ನ ಮೂಲ ಮನೆಯಾದ ಪರಮಾತ್ಮನ ಕಡೆಗೆ ಹೋಯಿತು. ಇನ್ನು ಅದು ಇನ್ನೊಂದು ದೇಹವನ್ನು ಧರಿಸಿ ಇನ್ನೊಂದು ಜನ್ಮವನ್ನು ತಳೆದು

ಭೂಮಿಯಲ್ಲಿ ಮತ್ತೆ ಜನಿಸಿ ಬರುವುದು. ಪರಮಾತ್ಮನನ್ನು ಪೂರ್ಣವಾಗಿ ಅರಿತು–ತಾನು 'ನಾನು' ಎಂಬ ವಸ್ತುವಲ್ಲ, ಆದರೆ ಆತ್ಮವು ಎಂದು ತಿಳಿಯುವ ತನಕ ಅದಕ್ಕೆ ಬಿಡುಗಡೆಯಿಲ್ಲ. ಇದನ್ನು ತಿಳಿದಮೇಲೆ ಅವು ಪರಮಾತ್ಮನಲ್ಲಿ ಐಕ್ಯಹೊಂದಿ ಅವನಲ್ಲಿ ಲೀನವಾಗಿ ಹೋಗುವವು. ಈ ತರಹದ ಜ್ಞಾನವು ಬಂದಮೇಲೆ ಮನುಷ್ಯನಿಗೆ ಸುಖದುಃಖಗಳ ಸಂಬಂಧವೇ ಉಳಿಯುವದಿಲ್ಲ. ಏಕೆಂದರೆ ಅವನು ಅವುಗಳನ್ನು ಮೀರಿದ ಪರಮಾತ್ಮನ ಅಂಶವೇ ತಾನೆಂದು ತಿಳಿಯುವನು. ಜಗತ್ತಿನಲ್ಲಿ ನಾವು ಯಾರಿಗೆ ಸಾಧು–ಸಂತರೆನ್ನುವೆವೋ ಅವರು ಇಂತಹ ಜ್ಞಾನವನ್ನು ಪೂರ್ಣವಾಗಿ ಹೊಂದಿರುತ್ತಾರೆ. ಇಂದಿನ ಮಹಾತ್ಮಾ ಗಾಂಧಿಯವರು ಇಂತಹ ಯುಗಪುರುಷರು. ಅವರು ಬರಿ ದೇಶಕಾರ್ಯವನ್ನು ಮಾಡಲು ಜನಿಸಿ ಬಂದಿಲ್ಲ; ಆದರೆ ತಮ್ಮ ಆತ್ಮದ ಉನ್ನತಿಯನ್ನು ಅಂದರೆ ಪೂರ್ಣಜ್ಞಾನವನ್ನು ಪಡೆಯಲು ಬಂದಿರುವರು. ಇಂಥ ಮಹಾಪುರುಷರು ಇತರರಿಗೂ ಜ್ಞಾನವನ್ನು ಕೊಡಲು ಸಮರ್ಥರಿರುತ್ತಾರೆ. ಅಂತೆಯೇ ಅವರು ' ಗುರು ' ಗಳಾಗುವರು.

ಒಟ್ಟಿನ ಮೇಲೆ ಏನೆಂದ ಹಾಗಾಯಿತು ? ಪರಮಾತ್ಮನೆಂಬ ದಿವ್ಯ ಚೈತನ್ಯವೊಂದಿದೆ. ಆತನ ವ್ಯಕ್ತ–ಅಂದರೆ ಕಣ್ಣಿಗೆ ಪ್ರಕಟವಾಗಿ ಕಾಣುವ ರೂಪವೇ ಈ ಸೃಷ್ಟಿಯು. ಆತನ ಅವ್ಯಕ್ತ ಸ್ವರೂಪವೆಂದರೆ ನಮ್ಮ ಕಣ್ಣಿಗೆ ಕಾಣದ–ಮುಗಿಲಿನಾಚೆಗಿರುವ ಪ್ರೇಮ-ಅಂತರಿಕ್ಷ. ಮನುಷ್ಯರೆಂದರೆ ತೇಜೋರಾಶಿಯಾದ ದೇವರ ಒಂದೊಂದು ಕಿಡಿಗಳಂತಿದ್ದ ಜೀವಿಗಳು. ದೇವನು ಹೇಗೆ ಈ ಜಗತ್ತಿನ ಆಕಾರವನ್ನು ಧರಿಸಿರುವನೋ ಹಾಗೆಯೇ ನಾವು ಈ ದೇಹವನ್ನು ಧರಿಸಿ ಹುಟ್ಟಿ ಬಂದಿರುವೆವು. ದೇವರು ಕೇವಲ ಲೀಲಾ ಮಾತ್ರವಾಗಿ ಈ ಸೃಷ್ಟಿಯನ್ನು ನಿರ್ಮಿಸಿದವನು ಆತನು ನಮ್ಮನ್ನು ಹುಟ್ಟಿಸಿರುವದಾದರೂ ಲೀಲೆಗೋಸ್ಕರವೇ ಸರಿ. ಆದರೆ ನಾವು ಇದನ್ನೆಲ್ಲ ತಿಳಿದುಕೊಂಡು ದೇವಾಂಶವಾದ ನಮ್ಮ ನಿಜಸ್ವರೂಪವನ್ನು ಅರಿಯುವ ತನಕ ನಾನೆಂದರೆ ಇಂಥದೊಂದು ದೇಹ, ಇಷ್ಟು ಯೋಗ್ಯತೆಯ ಬುದ್ಧಿ, ಇಂಥ ಕುಟುಂಬದಲ್ಲಿ ಜನಿಸಿ ಬಂದ ಆಕಾರ ಇಷ್ಟೇ ಎಂದು ತಿಳಿದುಕೊಂಡು ಗೋಳಾಡುವೆವು. ಆದರೆ ನಿಜವಾಗಿ ನಾವೆಂದರೆ ಈ ಘಟನೆಯನ್ನೆಲ್ಲ ಮೀರಿರುವ ಆತ್ಮ. ಅದು ಧರಿಸಿದ ದೇಹವು ಮಣ್ಣುಗೂಡುವದೇ ಹೊರತು ಆ ಆತ್ಮವು

ಮಣ್ಣುಗೂಡುವದಿಲ್ಲ. ಆದು ತಂದ ಬುದ್ಧಿಯು ಲಯವಾಗಿ ಆತ್ಮವು ಮುಂದೆ ಧರಿಸುವ ಜನ್ಮದಲ್ಲಿ 'ಕರ್ಮ'ದ ಫಲದಂತೆ ಆಚರಿಸುವದೇ ಹೊರತು ಆ ಆತ್ಮವೇ ಬದಲಾಗವದಿಲ್ಲ. ಮನುಷ್ಯರಾದ ನಾವು ನಿಜವಾದ ದೇವಸ್ವರೂಪರೆಂದು ಅರಿತು ದೇವರಲ್ಲಿ ಲೀನವಾಗುವ ತನಕ ಅದು ಹೀಗೆಯೇ ಜನ್ಮದಿಂದ ಜನ್ಮಕ್ಕೆ ಪ್ರಯಾಣ ಬೆಳೆಸುವದು.

ಲಲಿತಾ ! ಇನ್ನೊಂದು ಮಾತನ್ನು ಇಲ್ಲಿ ಸ್ಪಷ್ಟಗೊಳಿಸಬೇಕು. ಈಗಿನ ದಿವಸಗಳಲ್ಲಿ ದೇವರ ಹೆಸರನ್ನು ತೆಗೆದರೆ ನಗುವವರೂ ಕೆಲವರಿದ್ದಾರೆ. ದೇವರಿಲ್ಲವೆಂದು ಕೆಲವರು ಸಾಧಿಸುತ್ತಾರೆ. ಆತನು ಗಾಳಿಯಂತೆ ಬರಿ ಚೈತನ್ಯವೆಂದು ಹಲವರು ಹೇಳುತ್ತಾರೆ. ಸೃಷ್ಟಿಯು ಪ್ರಾರಂಭವಾದಂದಿನಿಂದ ದೇವರು ಮೇಲಿನಿಂದ ಕೆಳಗಡೆ ಸಾಯಹತ್ತಿದನಂತೆ ! ಮೊದಲು ಅವನ ಮೆದುಳು ನಾಶವಾಯಿತು. ಅಂದರೆ ಬುದ್ಧಿ ಭ್ರಂಶವಾಯಿತು. ಆ ಮೇಲೆ ಅವನ ಕಣ್ಣುಗಳು ಹೋದವು. ಅಂತೆಯೇ ಜಗತ್ತಿನಲ್ಲಿ ಇಷ್ಟು ಅನ್ಯಾಯಗಳು ನಡೆದಿವೆ ಇನ್ನು ಅವನ ಹೃದಯವೇ ಬಂದಾಗುವ ಹೊತ್ತು ಬಂದಿದೆಯಂತೆ ! ವಿದ್ಯುತ್ತಿನಂತೆ, ಆಕರ್ಷಣದಂತೆ ದೇವರು ಬರಿ ಶಕ್ತಿಯೆಂದು ಬೇರೆ ಕೆಲವರು ಸಾರುತ್ತಾರೆ. ದೇವರಿಲ್ಲವೇ ಇಲ್ಲ; ಭೌತಿಕ ಸೃಷ್ಟಿಯು ತನ್ನಿಂದ ತಾನೆ ಹುಟ್ಟಿ ಬಂದಿತು; ಪಂಚಮಹಾಭೂತಗಳೇ ದೇವರು; ಇವುಗಳಿಂದ ಸಸ್ಯಸೃಷ್ಟಿಯು ಹುಟ್ಟಿ ಪಶುವರ್ಗಕ್ಕೆ ದಾರಿಮಾಡಿತು; ಮುಂದೆ ಪ್ರಾಗತಿಕವಾಗಿ ಪಶುಜಾತಿಯು ಮಂಗನಿಂದ ಮನುಷ್ಯನವರೆಗೆ ಬೆಳೆಯಿತು. ಹೀಗೆ ಹೇಳುವವರೂ ಇದ್ದಾರೆ. ಜಡತೆಯೇ ಸೂಕ್ಷ್ಮವಾಗುತ್ತ ನಡೆದಿದೆಯೇ ಹೊರತು ಸೂಕ್ಷ್ಮವಾದ ಆತ್ಮದ ಅವತಾರಕ್ಕಾಗಿ ಜಡತೆಯು ಬಂದಿಲ್ಲವೆಂದು ಅವರ ಅಭಿಪ್ರಾಯವಾಗಿದೆ.

ಆದರೆ ಈ ವಾದಕ್ಕೆ ಕೊನೆಯೆಲ್ಲಿ ? ಮೇಲಾಗಿ ವಾದಕ್ಕೆ ಪ್ರತಿವಾದವಿರುವದೆಂಬುದನ್ನು ಓದಿ ತಿಳಿಯಲು ಸಮರ್ಥಳಾಗದ ನಿನಗೆ ಇದನ್ನೆಲ್ಲ ಹೇಳಿ ಉಪಯೋಗವೇನು ? ಸುಮ್ಮನೆ ನಿನ್ನ ಬುದ್ಧಿಯು ಇದನ್ನೆಲ್ಲ ಕೇಳಿ ಕುಂಠಿತವಾಗಬಹುದು. ಆದುದರಿಂದ ಒಂದೇ ಮಾತಿನಲ್ಲಿ ಹೇಳುವೆನು: ವಿಶ್ವದ ಹೃದಯದಿಂದ ದಿವ್ಯವಾದ ಸಂಗೀತವೊಂದು ಸದಾ ಹೊರಸೂಸುತ್ತಿರುತ್ತದೆ. ಗುರುತ್ವಾಕರ್ಷಣಶಕ್ತಿಯು ನಕ್ಷತ್ರಮಂಡಲವನ್ನೆಲ್ಲ ಬೀಳದ

ಹಾಗೆ ಎತ್ತಿ ಹಿಡಿದಂತೆ ಈ ಸಂಗೀತವು–ಪ್ರೇಮವು ವನರಾಜ–ಪಶು-ಪಕ್ಷಿ ಮಾನವರನ್ನೆಲ್ಲ ಪ್ರೀತಿಯ ಬಲದಿಂದ ಕೂಡಿಸಿದೆ, ಒಂದಾಗಿಸಿದೆ. ಈ ವಿಶ್ವ ಸಂಗೀತವೇ ದೇವರು ಇದರೊಡನೆ ಸರಾಗವಾಗಿ ಬೆರೆಯಬೇಕೆಂದು ಒಡ ಮೂಡಿದ ಆಶೆಯೇ ಆತ್ಮ. ತಾಳಬದ್ಧವಾಗಿ ಈ ಸೃಷ್ಟಿಯು ನಡೆದಿರುವ ಸಂಗ ತಿಯೇ ವಿಶ್ವಸಂಗೀತದ ಕುರುಹು, ಪ್ರಮಾಣ. ಒಳ್ಳೆಯದನ್ನೆಲ್ಲ, ಸಾತ್ವಿಕ ಸೌಂದರ್ಯವನ್ನೆಲ್ಲ ಹೊಂದಿಕೊಂಡಿರಬೇಕೆಂಬ ಹಂಬಲನೇ ಆತ್ಮದ ಅಸ್ತಿತ್ವ ಕ್ಕಿದ್ದ ಆಧಾರ. ಅನಂತತೆಯ ತತ್ವವನ್ನು ನಾವು ಒಪ್ಪಿಕೊಳ್ಳದಿದ್ದರೂ ಸರಿ; ಕಾಲ–ಪ್ರದೇಶಗಳನ್ನೂ ಮರೆತು ವಿಶ್ವಸಂಗೀತದೊಡನೆ ನಾವು ಒಂದಾಗು ವಾಗ ಆತ್ಮವು ಅಮರವೋ ಇಲ್ಲವೋ ಎಂಬುದನ್ನು ಯಾರು ಚರ್ಚಿಸುತ್ತ ಕೂಡುತ್ತಾರೆ.

'ದೇವರನ್ನು ನೀವು ಕಂಡಿರುವಿರಾ!' ಎಂದು ನೀನು ಪ್ರಶ್ನೆ ಕೇಳು ವದು ನನಗೆ ಗೊತ್ತಿದೆ. ಉತ್ತರವೆಂದು ಇಷ್ಟು ಮಾತ್ರ ನಾನು ಹೇಳಬಲ್ಲೆ. ವಿಶ್ವಸಂಗೀತದೊಡನೆ ನಾನು ಬೆರೆಯಲು ಹವಣಿಸುತ್ತಿದ್ದೇನೆ. ಅನೇಕಸಲ ಭಾವನೆಯ ಅದ್ವೈತವನ್ನೂ ಹೃದಯವು ವಿಶ್ವಹೃದಯದೊಡನೆ ಒಂದಾದು ದನ್ನೂ ಅನುಭವಿಸಿದ್ದೇನೆ. ಅಂತೆಯೇ ಇವೆಲ್ಲ ಮಾತುಗಳನ್ನು ನಿನಗೆ ಹೇಳು ತ್ತಿದ್ದೇನೆ.

ಸರ್ವಜ್ಞನಂತೆ ನಿನ್ನೆದುರು ನಾನು ನಟಿಸುತ್ತಿದ್ದೇನಲ್ಲವೇ? ಎಲ್ಲವನ್ನೂ ಬಲ್ಲವನಂತೆ ನಿನಗೆ ಉದ್ದುದ್ದ ಪತ್ರಗಳನ್ನು ಬರೆಯುತ್ತಿದ್ದೇನಲ್ಲವೇ? ಇದನ್ನು ನೆನಸಿ ಒಮ್ಮೊಮ್ಮೆ ನನಗೇ ನಾಚಿಕೆಯಾಗುತ್ತದೆ. ಮೊನ್ನೆ ಕ್ಲಾಸಿನಲ್ಲಿ ಪ್ರೊಫೆಸರರ ಲೆಕ್ಚರು ನಡೆದಿತ್ತು. ಅವರು ಹೇಳಿದ ಒಂದು ಮಾತು ಸರಿಯಲ್ಲ ವೆಂದು ನನಗೆನಿಸಿತು. ಆಗ ಎದ್ದು ನಿಂತು ನನ್ನ ಅಭಿಪ್ರಾಯವನ್ನು ಸ್ಪಷ್ಟ ಗೊಳಿಸಿದೆ. ಆಗ ನಾನು ಹೇಳಿದುದನ್ನು ಒಪ್ಪಿಕೊಂಡು ಪ್ರೊಫೆಸರರು: 'ನೋಡಿರಿ! ಇವರು ನನಗಿಂತ ಹೆಚ್ಚಾಗಿ ಓದಿದಾರೆ!' ಎಂದು ಹೇಳಿ ಮುಂದೆ ಸಾಗಿದರು. ಸಾಹಿತ್ಯದ ಸಮುದ್ರದಲ್ಲಿಯೇ ಈಜುಬಿದ್ದ ನಮ್ಮ ಪ್ರೊಫೆಸರರೆತ್ತ; ಕೆರೆಯೊಂದರಲ್ಲಿ ಈಸು ಕಲಿಯುತ್ತಿದ್ದ ನಾನೆತ್ತ! ಕಲಿತಲ್ಲಿ ವಿನಯವಿದೆ; ಕಲಿಯಬೇಕೆಂಬ ಹವ್ಯಾಸವುಳ್ಳ ನನ್ನಲ್ಲಿ,—ಹರಟೆ ಕೊಚ್ಚಿ ದಂಗು ಬಡಿಸಬೇಕೆಂಬ ಒರಟುತನವಿದೆಯೋ ಏನೋ!

ನಿನ್ನೊಲವಿನ,

**ವನಮಾಲಿ**

# ಓಲೆ (೩) ಮಾನವನ ಕರ್ತವ್ಯಗಳು

ಪ್ರಿಯ ಲಲಿತಾ,

ಹೋದ ಸಲ ನಾನು ದೇವರನ್ನು ಕುರಿತು ಸುದೀರ್ಘವಾಗಿ ಬರೆದಿದ್ದೆ. ಅದಕ್ಕೆ ಪ್ರತಿಯಾಗಿ ನೀನು ಬರೆದ ಉತ್ತರವು ನನ್ನನ್ನು ಮುಗ್ಧನನ್ನಾಗಿ ಮಾಡಿದೆ. "ನಾನು ನಿಮ್ಮ ದೇವರಹುದೋ ಅಲ್ಲವೋ ನನಗೆ ಗೊತ್ತಿಲ್ಲ. ನೀವು ಮಾತ್ರ ನನ್ನ ದೇವರು" ಎಂದು ನೀನು ನನ್ನ ವೇದಾಂತವನ್ನೆಲ್ಲ ನಗೆಯಾಡಿಬಿಟ್ಟೆಯಲ್ಲ! ಇದಕ್ಕೇನೆನ್ನಬೇಕು! ಮಾನವನ ಸಿದ್ಧಾಂತಗಳೆಲ್ಲ ಹುಡುಗರು ಕಟ್ಟಿದ ಗುಬ್ಬಿಮನೆಗಳಂತೆಯೇ ಸರಿ. ಕಡಲ ತೀರದಲ್ಲಿಯ ಮಳಲು ಗೂಡುಗಳಾಗಿ ಅವರ ಕೈಯಲ್ಲಿ ರೂಪಗೊಂಡು ಮತ್ತೆ ಮಳಲಾಗುವದು. ಅನಾದ್ಯನಂತವಾಗಿ ಬದುಕುವದು ಅನುಭವವಲ್ಲದೆ ಮತ್ತೇನು?

ಮೊನ್ನೆ ನಾನು ಶ್ರೀ. ಜೆ. ಕೃಷ್ಣಮೂರ್ತಿಯವರ ಉಪನ್ಯಾಸವೊಂದನ್ನು ಕೇಳಲು ಹೋಗಿದ್ದೆ. ಕೇಳಿ ತಿರುಗಿ ಕೋಣೆಗೆ ಬಂದಾಗ ಅದೇ ವಿಚಾರ ಲಹರಿಯು ನನ್ನ ತಲೆಯಲ್ಲಿ ಸುಳಿದಾಡಹತ್ತಿತು. ಮಾನವನ ಕರ್ತವ್ಯಗಳ ಬಗ್ಗೆ ಆ ಮಹನೀಯರು ಮಾತನಾಡಿದರು. ಅದೇ ವಿಷಯವನ್ನು ಕುರಿತು ವಿಚಾರಗಳನ್ನು ಈ ಸಲ ನಿನಗೆ ಬರೆಯುತ್ತೇನೆ.

ಒರ್ವ ವ್ಯಕ್ತಿಯು ಈ ಜಗತ್ತಿನ ಮೇಲೆ ಹುಟ್ಟಿಬಂದವನೆಂದು ತಿಳಿಯುವಾ. ಈ ಜಗತ್ತಿನಲ್ಲಿ ಅನೇಕ ರಾಷ್ಟ್ರಗಳಿವೆ, ಪ್ರಾಂತಗಳಿವೆ. ಇವುಗಳಲ್ಲಿ ಯಾವುದಾದರೊಂದು ದೇಶದಲ್ಲಿ ಆ ವ್ಯಕ್ತಿಯು ಹುಟ್ಟಿಬರಬೇಕು. ಪ್ರತಿಯೊಂದು ದೇಶದಲ್ಲಿ ಲೆಕ್ಕವಿಲ್ಲದಷ್ಟು ಕುಟುಂಬಗಳಿವೆ. ಇವುಗಳಲ್ಲಿಯ ಒಂದು ಕುಟುಂಬವನ್ನಾರಿಸಿ ವ್ಯಕ್ತಿಯು ತಲೆಯೆತ್ತಬೇಕು. ಆ ಕುಟುಂಬದವರೆಲ್ಲ ಯಾವುದಾದರೊಂದು ಭಾಷೆಯನ್ನು ಆಡುತ್ತಿರುತ್ತಾರೆ. ಅದೇ ಭಾಷೆಯನ್ನು ವ್ಯಕ್ತಿಯು ತನ್ನದಾಗಿಸಿಕೊಳ್ಳಬೇಕು. ಹೀಗೆ ಹುಟ್ಟಿಬಂದ ಮೂಲಕ ತನ್ನದೊಂದು ಪ್ರಪಂಚವನ್ನೇ ವ್ಯಕ್ತಿಯು ಬೆಳೆಸಬೇಕಾಗುವದು. ತನ್ನ

ದೇಶ, ತನ್ನ ಜನರು, ತನ್ನ ದುಡ್ಡು, ತನ್ನ ಭಾಷೆ,- ಹೀಗೆ ಒಂದು ಕನಸನ್ನೇ ಆ ವ್ಯಕ್ತಿಯು ಕಟ್ಟಬೇಕಾಗುವದು. ಆದರೆ ಕಟ್ಟಿದ ಕನಸೇ ಸತ್ಯವೆಂದು ಅನೇಕರು ತಿಳಿಯುವದುಂಟು. ಈ ಭ್ರಮೆಯಿಂದ ನಾವು ದೂರಿರಬೇಕು. ಜೀವನಿಗೆ ಇಂಥದೊಂದೇ ಭಾಷೆಯೊಂದು ನಾವು ಹೇಳುವದು ಬರಿ ಮೋಹ ದಿಂದ. ಏಕೆಂದರೆ ಎಲ್ಲ ಭಾಷೆಗಳನ್ನು ಮೀರಿದ ಭಾಷೆಯನ್ನೇ ಜೀವನು ಆಡು ತ್ತಿರುತ್ತಾನೆ. ಇಂಥದೊಂದು ದೇಶವೇ ನನ್ನದೆಂದು ನಾನು ತಿಳಿಯುವದು ಬರಿ ಮೋಹದಿಂದ. ದೇವನು ನಿರ್ಮಿಸಿದ ಸೃಷ್ಟಿಯೆಲ್ಲ ಜೀವನ ದೇಶವಲ್ಲವೆ ?

ಮೋಹದಿಂದ ನಾವು ಮಾಡುತ್ತಿರುವುದನ್ನೆಲ್ಲ ನಮಗೆ ಪ್ರಿಯವಾದ ಕರ್ತವ್ಯಗಳೆಂದು ತಿಳಿದು ಮಾಡುವದರಲ್ಲಿಯೇ ನಿಜವಾದ ಜಾಣ್ಮೆಯಿದೆ. 'ಶರೀರಮಾದ್ಯಂ' ಆತ್ಮದ ಆವರಣವೆಂದು ತಿಳಿದು ನಾವು ದೇಹವನ್ನು ಸಂರಕ್ಷಿಸಬೇಕು. ಕಣ್ಣಿಲ್ಲದೆ ಕಣ್ಣೆದುರಿಗಿದ್ದುದನ್ನು ಕಂಡವರಾರು ? ದೇಹವು ಕಣ್ಣಿದ್ದಂತೆ, ಆತ್ಮವು ಕಣ್ಣೊಳಗಿನ ದೃಷ್ಟಿ ಇದ್ದಂತೆ. ಕಣ್ಣಿಲ್ಲದೆ ದೃಷ್ಟಿಯೆ ಲ್ಲಿಂದ ಬಂತು ? ಶರೀರವನ್ನು ಬಳಲಿಸಬಾರದು, ಬಳಿಸಬೇಕು ದೇಹಾರೋಗ್ಯ ವಿಲ್ಲದೆ ಕೊರಗಿ ತಾವು ಮಾಡಬೇಕೆಂದಿರುವ ಕಾರ್ಯಗಳನ್ನು ಮಾಡಲಾಗದೆ ಕಮರಿ ಹೋದ ಅನೇಕ ಮಹಾಪುರುಷರ ಚರಿತ್ರವನ್ನು ಇತಿಹಾಸವು ಸಾರು ತ್ತದೆ. ಇದನ್ನು ಲಕ್ಷ್ಯದಲ್ಲಿಟ್ಟು ಆತ್ಮದೇವನ ಗುಡಿಯೆಂದು ನಾವು ದೇಹ ವನ್ನು ಸಂರಕ್ಷಿಸಬೇಕು. ದೇಹವೆಂದರೆ ದೇವನು ಮಾನವನಿಗಿತ್ತ ನಾರಾಯ ಣಾಸ್ತ್ರ. ಅದನ್ನು ಸಾಧ್ಯವಿದ್ದಷ್ಟು ದಿನ ಕ್ರತುಶಕ್ತಿಯ (Will) ಬಿಲ್ಲಿಗೆ ಹೂಡುವ ಧನುರ್ಧಾರಿಯಾಗಬೇಕು ಮನುಷ್ಯ; ಉತ್ತರಕುಮಾರನಾಗ ಬಾರದು.

ಇದರಂತೆ ಉಳಿದ ಶಕ್ತಿಗಳ ವಿಷಯ. ಬುದ್ಧಿಬಲವು ಮನುಷ್ಯನನ್ನು ಈ ಜಗತ್ತಿನಲ್ಲಿ ಸಂರಕ್ಷಿಸುವ ಸಾಧನವಾಗಿದೆ. ಚೇಳಿಗೆ ಕೊಂಡಿಯಿದ್ದಂತೆ, ಆಕಳಿಗೆ ಕೋಡಿದ್ದಂತೆ, ಕಣೆಹಂದಿಗೆ ಮುಳ್ಳುಮೈಯಿದ್ದಂತೆ, ಗಿಡುಗನಿಗೆ ರೆಕ್ಕೆಯಿದ್ದಂತೆ, ಮನುಷ್ಯನಿಗೆ ಬುದ್ಧಿಯಿದೆ. ಉಳಿದ ಸಾಧನೆಗಳಿಗಿಂತ ಬುದ್ಧಿಯೇ ಮಿಗಿಲಾದದ್ದು ಅಂತೇ ಮಾನವನು ಉಳಿದ ಪ್ರಾಣಿವರ್ಗಗಳ ಮೇಲೆ ತನ್ನ ಆಧಿಪತ್ಯವನ್ನು ಸ್ಥಾಪಿಸಿದ್ದಾನೆ. ಆತ್ಮಸಂರಕ್ಷಣೆಗಾಗಿ, ಆತ್ಮೋ ನ್ನತಿಗಾಗಿ ನಾವು ಬುದ್ಧಿಯನ್ನು ಉಪಯೋಗಿಸಬೇಕು. ಉಪಯೋಗಿಸಲೆಂದು ಅದನ್ನು ಹದನವಾಗಿಸಬೇಕು.

ಬುದ್ಧಿಯನ್ನು ಬೆಳೆಸುವದು ಹೇಗೆ? ನಮ್ಮ ಸುತ್ತಣ ಜಗತ್ತಿನ ವಿಷಯದಲ್ಲಿ ಸಂಪೂರ್ಣ ಜ್ಞಾನವನ್ನು ಸಂಪಾದಿಸುವದರಿಂದ. ಸೃಷ್ಟಿಯಲ್ಲಿಯ ಸಸ್ಯ-ಪ್ರಾಣಿವರ್ಗಗಳ ನಿಸರ್ಗನಿಯಮಗಳೇನು? ಬೇರೆ ಬೇರೆ ದೇಶಗಳ ಲ್ಲಿಯ ವಸ್ತುಸ್ಥಿತಿಯೇನು, ಇತಿಹಾಸವಾವುದು? ಮಾನವನ ವಿಚಾರ, ಆಚಾರ, ನೀತಿ, ರೀತಿ, ಸಾಹಿತ್ಯ, ಇತಿಹಾಸ, ಧರ್ಮ, ಕರ್ಮ—ಇವೆಲ್ಲವು ಗಳನ್ನು ತಿಳಿಯುತ್ತ ಹೋದಂತೆ ನಮ್ಮ ಬುದ್ಧಿಯು ಬೆಳೆಯುತ್ತ ಹೋಗು ತ್ತದೆ. ಇಂಥ ಜ್ಞಾನಸಂಪಾದನೆಯಿಂದ ಬುದ್ಧಿಯನ್ನು ಬೆಳಿಸಿದವರೇ ಸುಸಂ ಸ್ಕೃತರು.

ಇದೇ ರೀತಿಯಾಗಿ ಮನುಷ್ಯನು ತನ್ನಲ್ಲಿದ್ದ ಕರ್ತೃತ್ವಶಕ್ತಿ, ಕಲ್ಪನಾ ಶಕ್ತಿ, ಹೃದಯವಂತಿಕೆ,— ಇವೆಲ್ಲವುಗಳನ್ನೂ ಶ್ರೀಮಂತವಾಗಿಸಬೇಕು. ದೇವರು ಬಿತ್ತಿದ ಬೀಜವನ್ನು ಮರವಾಗಿಸಬೇಕೆ ಹೊರತು ಮರೆಸಿಬಿಡ ಬಾರದು. ಇದು ಮಾನವನ ಆದ್ಯಕರ್ತವ್ಯ. ಹೂವರಳಿದಂತೆ ಅವನ ಜೀವನ ವಾಗಬೇಕು. ಅಂದರೆ ದೇವರು ಅವನನ್ನು ಹುಟ್ಟಿಸಿದ್ದಕ್ಕೆ ಸಾರ್ಥಕ ವಾಯಿತು.

ಮೇಲೆ ಹೇಳಿದಂತೆ ಮಾನವನು ಮುಟ್ಟಿಸಬೇಕಾದ ಕೆಲವು ಖುಣ ಗಳಿವೆ, ನಿಲುಕಬೇಕಾದ ಮಟ್ಟಗಳಿವೆ. ಹೆತ್ತ ತಾಯಿಯನ್ನು ಅವನು ಸಲುಹ ಬೇಡವೆ? "ತಾಯ ಹಾಲು ನೆತ್ತರಗಳಿಂದ ರಸದುಂಬಿ ಮೈಗೊಂಡ" ಮಾನವನು ತನ್ನ ಕುಲಬಳ್ಳಿಯನ್ನು ಕೊನರಿಸಬೇಕು, ತನ್ನ ಹಾಗು ತನ್ನ ಕುಟುಂಬದ ಆರ್ಥಿಕ ಸ್ಥಿತಿಯು ಸುಗಮವಾಗುವಂತೆ ವ್ಯವಹಾರವನ್ನು ಸಾಧಿಸಬೇಕು. ಅರ್ಥವಿಲ್ಲದಿದ್ದರೆ ಅನರ್ಥವೆಂಬುದು ಗೊತ್ತೇ ಇದೆ. ಇಡಿ ದೇಶದ, ಇಡಿ ಪ್ರಪಂಚದಲ್ಲಿಯ ಸುಖಶಾಂತಿಯು ಹೆಚ್ಚುವಂತೆ ಆವನು ಪ್ರಯತ್ನಿಸಬೇಕು, ಹಿಡಿದ ಮಣ್ಣನ್ನು ಹೊನ್ನಾಗಿಸಬೇಕು.

ಇನ್ನು ತಾಯ್ನಾಡು, ತಾಯ್ನುಡಿ. ನಾನು ಕನ್ನಡವನ್ನು ಮಾತನಾ ಡುವ ಜನಾಂಗದಲ್ಲಿ ತಲೆಯೆತ್ತಿದ್ದು ಸಹಜವಾಗಿ ಸಂಭವಿಸಿದ ಸಂಗತಿ ನಿಜ. ಆದರೆ 'ಕನ್ನಡ ತಾಯಿಯ ಮಕರಂದವುಂಡ' ಮೇಲೆ ಅವಳ ಪರಿಮಳ ವನ್ನು ಬೀರುವ ಗಾಳಿಯಾಗಬೇಡವೆ? ಕನ್ನಡ ತಾಯಿಯ ವೀರಶಾಸನಕ್ಕಾಗಿ

ದೇಹವನ್ನು ಕಲ್ಲಾಗಿಸಿ ನಿಲ್ಲಿಸಬೇಡವೆ ? ಭಾರತದಲ್ಲಿ ಹುಟ್ಟಿದ ಕಾರಣ 'ಭಾರತಮಾತೆಯ ಕಾರ್ತಿಕೋತ್ಸವ'ದೊಳಗಿನ ಒಂದು ಜ್ಯೋತಿಯಾಗ ಬೇಡವೆ ? ಭಾರತದ ಸ್ವಾತಂತ್ರ್ಯಕ್ಕಾಗಿ ಸಾಧ್ಯವಿದ್ದಷ್ಟರ ಮಟ್ಟಿಗೆಲ್ಲ ಪ್ರಯತ್ನಿಸಬೇಡವೆ ? ನಮ್ಮ ನಾಡು-ನುಡಿಗಳ ಮೇಲೆ ಮೋಹವಿದ್ದು ಉಳಿದವರ ನಾಡು-ನುಡಿಗಳನ್ನು ತಿರಸ್ಕರಿಸುವ ವ್ಯಾಮೋಹ ಬೇಡ ನಮಗೆ. ಇದೆಲ್ಲ ಪ್ರಿಯವಾದ ಕರ್ತವ್ಯವಾಗಲಿ, ಹುಚ್ಚನ ಹಟಮಾರಿ ತನವಲ್ಲ.

ಆದರೆ ಈ ರೀತಿಯಾಗಿ ಧರ್ಮ, ಅರ್ಥ, ಕಾಮಗಳೆಲ್ಲ ಮುಗಿದಾಗ ಕೊನೆಯ ಮಾತೊಂದು ನಮ್ಮನ್ನು ಎದುರಿಸುತ್ತದೆ. ನಾಡು-ನುಡಿಗಳ ಸೇವೆ ಯಾಗಿದೆಯೆಂದು ತಿಳಿಯೋಣ. "ಭೂಮಾತೆಯ ಹಿಡಿಮಣ್ಣಿನಲ್ಲಿ ಗುಡಿ ಗಟ್ಟಿ ನಿಂತ ಮೂರ್ತಿ"ಯಾದ ಮಾನವನು ಮಾನವಕುಟುಂಬದ ಅಭ್ಯು ದಯ-ಕಲ್ಯಾಣಗಳಿಗಾಗಿ ಮನಮುಟ್ಟಿ ದುಡಿಯುವನೆಂದು ತಿಳಿಯೋಣ. ಆಗ ಆತನು ಇನ್ನೊಂದು ಸ್ಥಿತಿಯನ್ನು ಎದುರಿಸುವನು. ಮಾನವನು "ವಿಶ್ವ ಮಾತೆಯ ಗರ್ಭಕಮಲದೊಳಗಿನ ಪರಾಗ ಪರಮಾಣುವೂ" ಅಹುದು. ವಿಶ್ವಚೈತನ್ಯದ ರಹಸ್ಯವನ್ನು ತಿಳಿದು ಅದರೊಡನೆ ಒಂದಾಗುವದೇ ಮಾನ ವನ ದೈವವಾಗಿದೆ, ಅವನ ಕುಲದ ಆಕಾಂಕ್ಷೆಯಾಗಿದೆ. ಇದು ಕೊನೆಯ ಮಾತಾಗಿದ್ದರೂ ಇದೇ ಮೂಲ ಮಾತು. ಇದನ್ನು ಸಾಧಿಸಲೆಂದೇ ಉಳಿದ ಕರ್ತವ್ಯಗಳನ್ನು ನಾವು ಕೈಕೊಳ್ಳುವೆವು. ಎಲ್ಲವೂ ಅಳಿದಾಗ ಉಳಿಯುವ ದೆಂದರೆ ಜೀವ, ವಿಶ್ವಚೈತನ್ಯ—ಇವುಗಳ ಸಾಮರಸ್ಯ. ಇದೇ ಸಮುದ್ರದೆಡೆಗೆ ಎಲ್ಲ ನದಿಗಳೂ ಹರಿಯುತ್ತಿವೆ. ಇದೇ ಧ್ರುವದ ಕಡೆಗೆ ಜೀವಚುಂಬಕದ ಮೊನೆ ತಿರುಗಿಸಿ ಎಲ್ಲ ಪ್ರಾಣನೌಕೆಗಳೂ ತೇಲುತ್ತಿವೆ.

ಈ ಓಲೆಗಳಲ್ಲಿ ಒಲವೆಲ್ಲಿದೆ,—ಎಂದು ನೀನು ಕೇಳಬಹುದು ! ಹಾಗಾ ದರೆ ಇದೇನು ಬರಿ ಉಪನ್ಯಾಸವೆಂದು ತಿಳಿದೆಯಾ ! ಪತ್ರದ ತುಂಬ ಬರಿ ನಿನ್ನ ಹೆಸರನ್ನು ಬರೆದು ಅದನ್ನು ಅಂಚೆಪೆಟ್ಟಿಗೆಯಲ್ಲಿ ಹಾಕಿದರೆ ಅದು ಒಲ ವಾದೀತೆ? ಇಲ್ಲದಿದ್ದರೆ 'ಮುದ್ದು, ಮುದ್ದು' ಎಂದು ಪತ್ರದ ತುಂಬೆಲ್ಲ ಸದು ಮುದ್ದಾಗಿ ಬರೆದರೆ ಒಲವು ಎದ್ದು ಕಂಡೀತೇ ! ನನ್ನ ನಿನ್ನ ವಿಚಾರಗಳು

ಹೆಚ್ಚು ಹೆಚ್ಚು ಆಳವಾಗಿ ಹೊಂದಿಕೊಂಡಂತೆ ನಮ್ಮ ಒಲವು ಬಲವಂತ ವಾಗುವದು ಆ ನಮ್ಮ ಪ್ರೀತಿಗೆ ಬೇಕಾದ ಸೂಕ್ಷ್ಮ ದೇಹವನ್ನೇ ಈ ಪತ್ರಗಳು ಕಲ್ಪಿಸಿಕೊಡುವವು. ಲಲಿತಾ! ನಾವಿಬ್ಬರು ಕೂಡಿ ಮನೆಹೂಡಿದ ಮೇಲೆ ನಾನು ನಿನಗೆ ಪತ್ರಗಳನ್ನು ಬರೆಯುವದು ಹೇಗೆ? ಸಿಟ್ಟಾದಾಗ,—ಮಾತು ಬಿಟ್ಟಾಗ ಮಾತ್ರ! ಅಂತೇ ಈಗ ಬರೆಯುವದನ್ನೆಲ್ಲ ಬರೆದುಕೊಂಡುಬಿಡು ತ್ತಿದ್ದೇನೆ!

ನಿನ್ನೊಲವಿನ,

**ವನಮಾಲಿ**

## ಓಲೆ (೪) ಭಕ್ತಿ

ಪ್ರಿಯ ಲಲಿತಾ,

ಹೋದ ಸಲ ಮಾನವನ ಕರ್ತವ್ಯಗಳನ್ನು ಕುರಿತು ಬರೆದ ಓಲೆಯನ್ನು ನೀನು ಇನ್ನೊಮ್ಮೆ ಲಕ್ಷ್ಯಗೊಟ್ಟು ಓದು. ಓದಿದರೆ,–'ಇಷ್ಟು ಕರ್ತವ್ಯಗಳನ್ನು ನೆರವೇರಿಸಲು ಮನುಷ್ಯನಿಗೆ ವೇಳೆಯೆಲ್ಲಿದೆ?" ಎಂಬ ನಿನ್ನ ಪ್ರಶ್ನೆಯು ತಾನಾಗಿಯೇ ಕಳಚಿಬೀಳುವದು. ಪ್ರತಿದಿನ ಇಪ್ಪತ್ತನಾಲ್ಕುತಾಸು ಮನುಷ್ಯನು ಉಸಿರಾಡಿಸುತ್ತಿರುತ್ತಾನೆ. 'ಉಸಿರಾಡಿಸುವದೂ ಒಂದು ಕರ್ತವ್ಯವಾಯಿತಲ್ಲ!' ಎಂದು ಅವನು ನಿಟ್ಟುಸಿರುಬಿಟ್ಟರೆ ಯಾರೇನು ಮಾಡಬೇಕು! 'ಕರ್ತವ್ಯ'ಗಳೆಂದರೆ ಜುಲುಮೆಯಿಂದ ಮಾಡಬೇಕಾದ ಕೆಲಸಗಳೆಂದು ನಾವೇಕೆ ತಿಳಿದುಕೊಳ್ಳಬೇಕು? ನದಿಯು ಹರಿಯುತ್ತಿರುವಂತೆ, ಗಾಳಿಯು ಬೀಸುವಂತೆ, ಮಾನವನ ಜನ್ಮವೂ ಒಂದು ನಿಟ್ಟು ಹಿಡಿದು ಸಾಗಿದೆ. ಅದು ತನ್ನ ಸೀಮೆಯನ್ನು ಮೀರಿ ಹೋಗಿರಬಾರದು; 'ಕಂಚಿ'ಯನ್ನು ಮುಟ್ಟದೆ ಇರಬಾರದು. ಹೀಗೆ ಸಾವಧಾನದಿಂದ ನಡೆದಾಗ ಅವನ ಕರ್ತವ್ಯಗಳು ತಮ್ಮಷ್ಟಕ್ಕೆ ತಾವೆ ಪೂರೈಸಿಕೊಳ್ಳುತ್ತವೆ. ಮುಖ್ಯವಾಗಿ ಬೇಕಾಗಿರುವದು—ಸಾವಧಾನ. "ಸುಮುಹೂರ್ತೆ ಸಾವಧಾನ" ಎಂದು ನಮ್ಮ ಮದುವೆಯಾಯಿತಲ್ಲ! ಜೀವನವು ಯಾವಾಗಲೂ ಸುಮುಹೂರ್ತವೇ ಸರಿ. ಅದು ಸಾವಧಾನವನ್ನು ಬೇಡುತ್ತಿರುತ್ತದೆ.

"ಉಳಿದ ಪ್ರಶ್ನೆಗಳು ಹಾಗಿರಲಿ; ದೇವಸಾಕ್ಷಾತ್ಕಾರ, ಸಾಕ್ಷಾತ್ಕಾರವೆಂದು ನೀವು ಬಡಿದುಕೊಳ್ಳುತ್ತಿರಲಿಲ್ಲ! ಅದರರ್ಥವಾದರೂ ಏನು?" ಎಂದು ನೀನು ಕೇಳಿ ನನಗೆ 'ಮುಯ್ಯ' ಹಾಕಿರುವೆ. ಈ ಓಲೆಯಲ್ಲಿ ಅದನ್ನು ತೀರಿಸಲು ಪ್ರಯತ್ನಿಸಿರುವೆನು.

ಕಣ್ಣಿಗೆ ಕಾಣದ ದೇವರನ್ನು ಕಂಡು ಅವನಂತೆ ನಾವೂ ಅಮರರಾಗುವದು ಹೇಗೆ? ಹುಟ್ಟನ್ನೂ ಸಾವನ್ನೂ ಮೀರಿ ಉಳಿಯುವದು ಹೇಗೆ? ನಾನು

ಕೊಳೆತುಹೋಗುವ ನರಪ್ರಾಣಿಯಲ್ಲ, ಮೊಳೆತು ಉಳಿಯುವ ದೇವಾಂಶ ವಾದ ಆತ್ಮವೆಂಬ ಅನುಭವವನ್ನು ಪಡೆಯುವದು ಹೇಗೆ ?

ಜಗತ್ತಿನಲ್ಲಿಯ ಅನೇಕ ವಿಚಾರವಂತರು ಈ ಪ್ರಶ್ನೆಯನ್ನು ಬೇರೆ ಬೇರೆ ರೀತಿಯಲ್ಲಿ ಬಿಡಿಸಲು ಪ್ರಯತ್ನಿಸಿದ್ದಾರೆ. ಎಲ್ಲ ದಾರಿಗಳೂ ರಾಜ ಧಾನಿಯ ಕಡೆಗೇ ಒಯ್ಯುವಂತೆ ಎಲ್ಲ ಸಂಸ್ಕೃತಗಳೂ ಇಂತಹ ಅಧ್ಯಾತ್ಮ-ಜ್ಞಾನದೆಡೆಗೇ ಬೊಟ್ಟುಮಾಡಿ ತೋರಿಸುತ್ತವೆ. ಅವುಗಳಲ್ಲಿ ಇವು ಮುಖ್ಯ ವಾದುವು : ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ. ಇನ್ನೂ ಬೇರೆ 'ಯೋಗ'ಗಳಿವೆ. ನನ್ನ 'ಯೋಗಾ-ಯೋಗ' ವೆಂದರೆ ಕಾವ್ಯಯೋಗವೆಂದು ನಾನು ತಿಳಿದುಕೊಂಡಿದ್ದೇನೆ. ಅದು ಉಳಿದ ಮಾರ್ಗಗಳಿಗಿಂತ ಭಕ್ತಿ ಯೋಗಕ್ಕೆ ಸಮೀಪವಾಗಿದೆ. ಭಕ್ತಿಯೋಗವೆಂದರೇನೆಂಬುದನ್ನು ನಿನಗೆ ಹೇಳಲೆ ?

ಹಿಂದೊಮ್ಮೆ 'ದೇವರೆ'ಂದರೇನೆಂಬುದನ್ನು ನಿನಗೆ ತಿಳಿಸಿದೆ. ಭಕ್ತಿ ಯೋಗವೆಂದರೆ, ಅವನನ್ನು ಅನನ್ಯಭಾವದಿಂದ ಪ್ರೀತಿಸುವದು. ಏಕಾಗ್ರ ಚಿತ್ತದಿಂದ ಕುಳಿತು ನಮ್ಮಲ್ಲಿಯ ಈ ಅಂತಃಕರಣವನ್ನು ಉಕ್ಕೇರಿಸುವದು ಹೀಗೆ ಕುಳಿತಾಗ ಕರುಣಾಮಯನಾದ ದೇವರು ನಮಗೆ ಬೇಕಾದ ಪ್ರಕಾಶ ವನ್ನು ಕರುಣಿಸುವನು. ತರತರಹದ ಬೆಳಕುಗಳು ನಾವು ಕಣ್ಣುಮುಚ್ಚಿದಾಗ ಒಳಗಣ್ಣಿನೆದುರು ಹಾಯ್ದುಹೋಗುವವು. 'ನಾವೆಂ'ದರೆ ದೇಹ-ಮನಸ್ಸು ಗಳನ್ನು ಬಿಟ್ಟು ಎಲ್ಲಿಯೋ ದೂರವಿರುವೆವೆಂದು ನಮಗೆನಿಸತೊಡಗುವದು ನಮ್ಮ ಆತ್ಮಕ್ಕೆ ರೂಪವಿಲ್ಲ; ಅದು ಪರಮಾತ್ಮನ ಅಂಶವೆಂದು ಆಗ ನಮಗೆ ಹೊಳೆಯುವದು. ನಿದ್ದೆ ಹೋದಾಗ—ಇಂದ್ರಿಯಗಳ ಅಬ್ಬರವು ಕಡಿಮೆ ಯಾದಾಗ—ಕನಸುಗಳ ಮುಖಾಂತರವಾಗಿ ಆತ್ಮವು ತನ್ನ ಗುರುತನ್ನು ಕರುಣಿಸುವದು. ಇಂಥ ದಿವಸ ಕನಸುಗಳಲ್ಲಿ ಇಂದ್ರಿಯಾತೀತ ಜೀವನ ವೊಂದು ನಮ್ಮ ಕಣ್ಣೆದುರು ನಿಲ್ಲುವದು.

ಮೊನ್ನೆ ನನಗೊಂದು ಕನಸು ಬಿದ್ದಿತ್ತು. ಒಂದು ನದಿಯ ದಂಡೆ ಗುಂಟ ತಿರುಗಾಡುತ್ತ ನಾನು ಹೋಗಿದ್ದೆ. ಬೆಳುದಿಂಗಳು ನೋಡಿದಲ್ಲೆಲ್ಲ ಬಿದ್ದಿತ್ತು. ಅಲ್ಲಿಯೇ ಒಂದು ಭವ್ಯ ದೇವಾಲಯವಿದ್ದಿತು. ಹತ್ತಿರದಲ್ಲಿ ತಾಳ-ತಂಬೂರಿಗಳನ್ನು ಹಿಡಿದು ನಾಮಕೀರ್ತನೆಗಳಲ್ಲಿ ಮಗ್ನರಾದ ಹೆಂಗಳೆಯರ

ಮೇಳವೊಂದು ನಿಂತಿತ್ತು. ನಾನು ಅಲ್ಲಿ ಹೋದೆ. ಹೋಗಿ ಗುಡಿಯೆದುರಿಗೆ ಕೈಮುಗಿದು ನಿಂತು ದೇವನನ್ನು ಒಮ್ಮನಸ್ಸಿನಿಂದ ಧೇನಿಸತೊಡಗಿದೆ ಹೀಗೆ ತುಸು ವೇಳೆಯಾದ ಮೇಲೆ ಕನಸಿನಲ್ಲಿಯೇ ಕಣ್ತೆರೆದು ನೋಡುತ್ತಿರಲು ಒಮ್ಮೆಲೆ ಗುಡಿಯ ಕಳಸದ ಮೇಲಿಂದ ಒಂದು ಗೋಲಾಕೃತಿಯ ಬೆಳಕು ಬಂದು ಸುಳಿಯಹತ್ತಿತು. ಮುಂದೆ ಆ ಬೆಳಕಿನ ಮೇಲೆ ತ್ರಿಮೂರ್ತಿಯಾದ ದತ್ತಾತ್ರಯನ ರೂಪವು ಕಂಡಿತು. ಅಹಾ! ಅದೆಂತಹ ರೂಪ! ನೀನು ಸೂರ್ಯನನ್ನು ನೋಡಿರುವಿಯಲ್ಲ! ಆ ಮೂರ್ತಿಯು ಸೂರ್ಯನನ್ನು ಕರಗಿಸಿ ಮಾಡಿದಂತೆ ಲಕಲಕ ಹೊಳೆಯುತ್ತಿತ್ತು!

ಇಂಥ ಕನಸುಗಳನ್ನು ಕಾಣುವದರಿಂದ ಮನಸ್ಸು ಪವಿತ್ರವಾಗುಳಿದು ದೇವಧ್ಯಾನದಲ್ಲಿ ಮಗ್ನವಾಗುವದು. ದಿವ್ಯ ಜ್ಞಾನವನ್ನು ಹುಡುಕಲು ನಾವು ಹೊರಟಿರುವ ದಾರಿಯು ಕತ್ತಲೆಯಲ್ಲಿ ತುಳಿಯುವ ಹಾದಿಯಂತೆ ಇರುವದೆನ್ನಬಹುದು. ಹೇಗೆ ಮುಂದುವರಿಯಬೇಕೆಂಬುದು ನಮಗೆ ಗೊತ್ತಿರುವದಿಲ್ಲ. ಇಂಥ ವೇಳೆಯಲ್ಲಿ ದೇವದೂತರು ಹಿಡಿದುಕೊಂಡು ಬಂದ ದೀವಿಟಿಗೆಗಳಂತೆ ಕನಸುಗಳು ನಮಗೆ ದಾರಿ ತೋರುವವು.

ಆದರೆ ಸಂಸಾರದ ಕೆಸರಿನಲ್ಲಿ ಸಿಕ್ಕುಬಿದ್ದವರಿಗೆ ಇಂಥ ಕನಸುಗಳು ಕಾಣುವದು ಹೇಗೆ? ಸೆಗಣಿಹುಳಗಳಂತಿದ್ದ ಮಾನವರಿಗೆ ತಗಣಿಯ ಲೆಕ್ಕವೇ ಹೊರತು ಮತ್ತಾವುದೂ ಬಾರದು. ಆದರೆ ಮಾನವನು ತನ್ನ ಮುಖ್ಯ ಕಾರ್ಯವನ್ನರಿತುಕೊಂಡಾಗ, ಅವನು ಕಣಸುಗಳ ನೆಲೆವೀಡಾಗುತ್ತಾನೆ. ಏಕಾಗ್ರಚಿತ್ತರಾಗಿ ಕುಳಿತಾಗ ನಮ್ಮೊಳಗೆ ಮೂಡುವ ಪ್ರಕಾಶ-ರೂಪಗಳೇ 'ಕಣಸು'ಗಳು. ಸೂಜಿಯ ಮೊನೆಯಂತೆ ಮಾನವನ ಜೀವವಾದಾಗ,— ಅಲ್ಲಿ ನೂರಾರು ಜ್ಯೋತಿಗಳು ತೂಗಾಡುವವು; ಅನೇಕ ದೇವದೂತರು ಬಂದು ಕುಣಿದಾಡುವರು; ಅನಂತ ಸೃಷ್ಟಿಯು ತನ್ನ ರಹಸ್ಯವನ್ನೆಲ್ಲ ಬಿಚ್ಚಿಡುವದು.

ಅಳುವು ಶಿಶುವಿನಲ್ಲಿ ಸ್ವಭಾವಸಿದ್ಧವಾಗಿ ಬರುವ ಗುಣವಾಗಿದೆ. ಬೆಳೆಯುತ್ತ ಹೋದ ಹಾಗೆ ಮಾನವನ ಬುದ್ಧಿಯು ಬೆಳೆದು ಅವನ ಆರ್ತತೆಯು ಕಡಿಮೆಯಾಗುವದೇನೋ ನಿಜ. ಆದರೆ ಜೀವನವು ಬುದ್ಧಿಯಾಚೆಗಿನ ಅನೇಕ ಮಾತುಗಳ ರಂಗಭೂಮಿಯಾಗಿದೆ. ನಮಗೆ ಗೊತ್ತಿಲ್ಲದ ಅನೇಕ

ಶಕ್ತಿಗಳು ನಮ್ಮ ಜೀವನವನ್ನು ಮಾರ್ಪಡಿಸುತ್ತವೆ. ಸುಖಪಡುವಾಗ ನಾವು ದೇವನಲ್ಲಿ ನಮ್ಮ ಕೃತಜ್ಞತೆಯನ್ನು ಸಮರ್ಪಿಸುತ್ತೇವೆ. ದುಃಖಿಸುವಾಗ ಅವನಲ್ಲಿ ಮೊರೆಯಿಡುತ್ತೇವೆ. ಸುಖ-ದುಃಖವನ್ನು ಮೀರಿದ ದರ್ಶನವನ್ನು ಪಡೆಯಬೇಕಾದಾಗ ಆ ದೇವನಿಗೆ ನಾವು ನಮ್ಮ ಜ್ಞಾನಸಾಧನೆಗಳನ್ನೇ ಸಮರ್ಪಿಸಿ "ನೀನೇ ನನ್ನ ಒಳಗಣ್ಣನ್ನು ತೆರೆ" ಎಂದು ಬೇಡಿಕೊಳ್ಳುತ್ತೇವೆ. ನಮ್ಮ ಅಸಹಾಯತೆಯನ್ನೇ ನಮ್ಮ ಶಕ್ತಿಯಾಗಿಸಿಕೊಂಡು ದೇವನಲ್ಲಿ ಅನನ್ಯವಾಗಿ ಶ್ರದ್ಧೆಯಿಡುವದೇ ಭಕ್ತಿಯೋಗ. ಜಗತ್ತಿನಲ್ಲಿಯ ಪರರ ದುಃಖಗಳನ್ನು ಕಂಡು ನಮ್ಮ ಕಣ್ಣೀರು ಸಂತತವಾಗಿ ಹರಿಯಬೇಕು. ಅವರ ಸುಖಗಳನ್ನು ಕಂಡು ಆನಂದಾಶ್ರುಗಳನ್ನು ನಾವು ಎಡಬಿಡದೆ ಸುರಿಸುವಷ್ಟು ಪರಿಪಾಕವನ್ನು ಹೊಂದಿರಬೇಕು. ಇದೂ ಭಕ್ತಿಯೋಗದ ಲಕ್ಷಣಗಳಲ್ಲೊಂದು. ಎಡರುಗಳು ಕಾಲ್ತೊಡಕಿ ಬಂದರೂ ತಾಳ್ಮೆಯನ್ನು ಕಳೆದುಕೊಂಡಿರಬಾರದು; "Cursed be the lay on which I was born" (ನಾನು ಹುಟ್ಟಿದ ದಿನಕ್ಕೆ ನನ್ನ ಅನಂತ ಶಾಪಗಳಿರಲಿ!) ಎಂದು ಜೋಬನಂತೆ ರೇಗಬಾರದು. 'ಪೂರ್ಣಯೋಗ'ದ ವಿಷಯದಲ್ಲಿ ಶ್ರೀಅರವಿಂದ ಮಹರ್ಷಿಗಳು ಹೇಳಿದಂತೆ ಅಚಲ ಶ್ರದ್ಧೆಯನ್ನಿಟ್ಟುಕೊಂಡು ತಲೆಯೆತ್ತಿ ಬಂದ ಸಂಕಲ್ಪವನ್ನು ಕದಲಗೊಡದೆ ಬಾಳಬೇಕು.

ದೇವರನ್ನು ನಾವು ಏನೆಂದು ಪ್ರಾರ್ಥಿಸಬಲ್ಲೆವು? ಈ ಸೃಷ್ಟಿಯ ಹೃದಯದಿಂದ ಪರಮಾತ್ಮನೆಡೆಗೆ ಒಂದೇ ಒಂದು ಪ್ರಾರ್ಥನೆಯು ಯಾವಾಗಲೂ ಏಳುತ್ತಿರುತ್ತದೆ. ಅದಾವುದೆಂಬುದನ್ನು ಬಲ್ಲೆಯಾ? ಕಾಹಲಿಲ್ ಗಿಬ್ರಾನ್ ಎಂಬ ಕವಿಯು 'ಭವಿಷ್ಯವಾದಿ' ಎಂಬ ತನ್ನ ಗ್ರಂಥದಲ್ಲಿ ಅದನ್ನು ಸೂಕ್ಷ್ಮವಾಗಿ ಕಂಡುಹಿಡಿದಿದ್ದಾನೆ:

"ಓ! ದೊರೆಯೆ!
ರೆಕ್ಕೆಗೊಂಡ ನಮ್ಮ ಜೀವವೇ ನೀನು.
ನೀನು ನೋಂತಿರುವದೇ ನಮ್ಮಲ್ಲಿ ನೋಂಪಿಯಾಗಿ ನಿಂತಿದೆ.
ನಮ್ಮಲ್ಲಿ ನೆಲೆಗೊಂಡ ನಿನ್ನ ಪ್ರೇರಣೆಯೇ ನಮ್ಮ ಇಚ್ಛೆಗಳನ್ನು ಪ್ರೇರಿಸುತ್ತದೆ.
ನಿನ್ನವೇ ಆದ ನಮ್ಮ ಕಾಳರಾತ್ರಿಗಳನ್ನು

ನಿನ್ನವೇ ಆದ ಹಗಲುಗಳನ್ನಾಗಿಸಿ
ನಮ್ಮ ಹೃದಯದಲ್ಲಿರುವ ನಿನ್ನ ಸ್ಫುರಣೆಯು ಬೆಳಗುತ್ತದೆ.
ನಿನ್ನ ಬಳಿಗೆ ಬಂದು ನಾವೇನನ್ನು ಬೇಡಬಲ್ಲೆವು ?
ಹೀಗಿನಲ್ಲಿರುವಾಗಲೆ ನಮ್ಮ ಬೇಡಿಕೆಗಳು ನಿನಗೆ ತಿಳಿಯುತ್ತವೆ.
ಓ ! ತಂದೆ ! ನಮಗೆ ನೀನೇ ಬೇಕು.
ನಿನ್ನ ವಿಶ್ವರೂಪವು ಈ ಮರ್ತ್ಯ ದೃಷ್ಟಿಗೆ ತಿಳಿದಂತೆ
ನಮ್ಮ ಸಮೃದ್ಧಿಯು ಇನ್ನಿಷ್ಟು ಸಮೃದ್ಧವಾಗುತ್ತದೆ. "

ಇಂಥ ಪ್ರಾರ್ಥನೆಯೇ ಭಕ್ತಿಯೋಗದ ಮೂಲವೆನ್ನಬಹುದು. ಈ ಬಗೆಯ ಆರ್ತತೆಯು ನಮ್ಮ ಸೊತ್ತಾಗಿ ನಿಲ್ಲಬೇಕು.

ಹರಿದಾಸರ ಕನ್ನಡ ಗೀತೆಗಳನ್ನು ನಿಮ್ಮ ತಾಯಿ ಅಂದು ಎಷ್ಟು ಸೊಗಸಾಗಿ ಹೇಳಿದರು ! " ಅರಿತವರಿಗತಿಸುಲಭ ಹರಿಯ ಪೂಜೆ " ಎಂದು ಜಗನ್ನಾಥದಾಸರು ಹಾಡಿರುವದು ನಿನಗೆ ಗೊತ್ತಿದೆಯೆ ? ಮಹದೇವಿಯಕ್ಕನ ಅಮೃತ ವಚನಗಳನ್ನು ನೀನು ಬಲ್ಲೆಯಾ ? ರತ್ನಾಕರವರ್ಣಿಯ ಭರತೇಶ ವೈಭವವನ್ನು ನೀನು ಓದುವಿಯಾ? ಇವನೆಲ್ಲ ನೀನು ತಿಳಿಯುತ್ತ ಹೋದಂತೆ ನಾನು ಬಣ್ಣಿಸುವ ಜೀವನದೃಷ್ಟಿ ನಿನ್ನಲ್ಲಿ ಕೊನರೀತು. . ಅದಕ್ಕಿಂತ ಹೆಚ್ಚೇನು ಬೇಕು ?

ನಿನ್ನೊಲವಿನ,
**ವನಮಾಲಿ**

# ಓಲೆ (೫) ಮೂರ್ತಿಪೂಜೆ

ಪ್ರಿಯ ಲಲಿತಾ,

ಭಕ್ತಿಯೋಗದ ವಿಷಯವನ್ನು ಹಿಂದೆ ಬರೆದೆ. ನಮಗಿಂತ ಉಜ್ವಲವಾದ ಈ ಶಕ್ತಿಯೊಡನೆ ಬೆರೆಯಬೇಕಾದರೆ ಭೂತಬೇತಾಳವನ್ನು ಸಾಧುಗೊಳಿಸುವ ಸಾಧಕರಂತೆ ನಾವು ಧಡಪಡಿಸಬೇಕಾಗಿಲ್ಲ. ನಮ್ಮ ಜೀವಿತದ ಆಸೆಗಳನ್ನೆಲ್ಲ ತೆರೆದಿಟ್ಟು ಸಿಕ್ಕಿರುವದನ್ನೆಲ್ಲ ಸೆಕ್ಕಿಸಿಕೊಂಡು ಬರದಿದ್ದಕ್ಕೆ ಬವಣಿಬಡದೆ " ದೇವರೆ ! ಇನ್ನಿಷ್ಟು ಬೆಳಕನ್ನು ನೀಡು !" ಎಂದು ಮೊರೆಯಿಟ್ಟರೆ ಸಾಕು. ಬೆಳಕು ಬಂದು ನಮ್ಮನ್ನು ಆವರಿಸುವದು.

ಹೆಂಗಳೆಯರಲ್ಲಿ ಅನೇಕರು ಮೂರ್ತಿಗಳನ್ನು ಪೂಜಿಸುವದನ್ನು ನೀನು ಬಲ್ಲೆ. ಗೋಕುಲಾಷ್ಟಮಿಯಲ್ಲಿ ಡೊಗ್ಗಾಲು ಕೃಷ್ಣನನ್ನು ನಿಮ್ಮ ತಾಯಿಯವರೇ ಪೂಜಿಸುವದಿಲ್ಲವೇ ? ಕೆಲವರಿಗೆ ವಿಷ್ಣು, ಹಲವರಿಗೆ ಶಿವ; ಇವರಿಗೆ ರಾಮಚಂದ್ರ, ಅವರಿಗೆ ದತ್ತಾತ್ರೇಯ ; ಒಬ್ಬರಿಗೆ ಸೂರ್ಯ, ಇನ್ನೊಬ್ಬರಿಗೆ ಚಂದ್ರ : ಹೀಗೆ ದೇವರನ್ನು ಅನೇಕರು ಅನೇಕ ವಿಧದಲ್ಲಿ ಪೂಜಿಸುತ್ತಾರೆ. ನುತಿಸುತ್ತಾರೆ. ಇದರರ್ಥವೇನು ? ಲಕ್ಷ್ಮಿಯ ಉಪಾಸನೆಯೂ ದುರ್ಗೆಯ ಉಪಾಸನೆಯೂ ಒಂದೇ ಎಂದು ಹೇಳಬಹುದೇ ? ವಿಶ್ವವನ್ನೇ ವ್ಯಾಪಿಸಿ ಕಣ್ಣಿಗೆ ಕಾಣುವ ರೂಪವಿಲ್ಲದೆ ನಿರ್ಗುಣನಾದ ದೇವರನ್ನು ' ಮೂರ್ತಿ ' ಯಾಗಿ ನಾವು ಸಂಕುಚಿತವಾಗಿಸಿದರೆ ಯೋಗ್ಯವಾಗಬಹುದೆ ? ಸಕಲ ಸೃಷ್ಟಿಕರ್ತನಾದ ದೇವರನ್ನು ನಾವು ಕಲ್ಲು–ಮಣ್ಣು–ಹೊನ್ನಿನ ಇಲ್ಲವೆ ಬೆಳಕಿನ ಒಂದು ಪ್ರತಿಮೆಯಲ್ಲಿ ಕಾಣಬಹುದೆ ? ' ಅಂತರಂಗದ ಕದವು ತೆರೆಯಿತಿಂದು ! ' ಎಂದು ದಾಸರೇನೋ ಹಾಡಿದರು, ಆದರೆ ತೆರೆದ ಮಂದಿರದಲ್ಲಿ ಬಂದ ಮೂರ್ತಿಯು ಬರಿ ಮೂರ್ತಿಯಾಗಿರಬಹುದೆ ?

" ಪೋಗದಿರೆಲೊ ರಂಗಾ ! ಬಾಗಿಲಿಂದಾಚೆಗೆ
ಪೋಗದಿರೆಲೊ ರಂಗಾ !
ಭಾಗವತರು ಕಂಡರೆತ್ತಿಕೊಂಡೊಯ್ವರೊ " !

ಎಂದು ದಾಸರು ಹಾಡಿದಾಗ ದೇವರೆಂದರೆ ಅವರ ಮನೆಯಂಗಳದಲ್ಲಿ ಆಡುವ ಶಿಶುವೆಂದು ತಿಳಿದರೋ ಏನೊ !

ಇದರಲ್ಲಿ ಒಂದರ್ಥವಿದೆ. ಆದರೆ ಇನ್ನೊಂದು ರೀತಿಯಲ್ಲಿ,—ಅನರ್ಥ ವಿದೆ. ನಿನ್ನೂರಲ್ಲಿ ವೆಂಕಟೇಶ ದೇವರ ಗುಡಿಯಿಲ್ಲವೆ? ನವರಾತ್ರಿಯಲ್ಲಿ ಅಲ್ಲಿಯ ಪೂಜಾರಿ ಮನೆತನದವರು ಮೂರ್ತಿಗೆ ದಿನದಿನಕ್ಕೆ ಹೊಸ ಹೊಸ ತಾದ ವೇಷಭೂಷಣಗಳನ್ನಿಡುತ್ತಾರೆ. ಸಂಜೆಯಲ್ಲಿ ಸಾವಿರಾರು ಸ್ತ್ರೀಯರು ಮೂರ್ತಿಯ 'ದರ್ಶನ'ಕ್ಕೆಂದು ಹೋಗುತ್ತಾರೆ. ಆದರೆ ಅವರಲ್ಲಿ ಭಕ್ತಿ ಯಿಂದ ನಡೆದುಕೊಳ್ಳುವವರೆಷ್ಟು ಮಂದಿ ? ಮುಕ್ಕಾಲು ಪಾಲು ಹೆಂಗಳೆ ಯರು ದೇವರಿಗಿಂತ ಹೆಚ್ಚು ಮೊದಲು ತಾವೇ ಮೆರೆಯಲೆಂದು ಹೊಸ ಸೀರೆ ಯನ್ನುಟ್ಟುಕೊಂಡು ಹೋಗುತ್ತಾರೆ. ಇಂಥ ವೇಳೆಯಲ್ಲಿ,—ಆ ಗುಡಿಯಲ್ಲಿ ದೇವರಿಲ್ಲ, ಈ ಜನರ ಮನದಲ್ಲಿ ಭಕ್ತಿಯಿಲ್ಲ. ತಮ್ಮ ಕರ್ತವ್ಯವೆಂದರೆ— ಕೇವಲ ತಮ್ಮ ಸಾಂಪತ್ತಿಕ ಸ್ಥಿತಿಯನ್ನಷ್ಟೆ ನೋಡಿಕೊಳ್ಳುವದಲ್ಲ,—ದೇಶ ಸೇವೆ ಆತ್ಮವಿಚಾರಗಳೂ ಅಹುದೆಂದು ತಿಳಿಯದವರಿಗೆ ಭಕ್ತಿಯೆಲ್ಲಿ ?

ಇನ್ನು ವೆಂಕಟೇಶ ದೇವರ ಉಡುಪನ್ನು ಪರೀಕ್ಷಿಸೋಣ. ದೇವರ ಮೂರ್ತಿಗೆ ಹೀಗೆ ವೇಷಭೂಷಣಗಳನ್ನು ತೊಡಿಸಿದಾಗ,—ಗುಡಿಗೆ ಹೋಗು ವವರು 'ದರ್ಶನ'ದಿಂದ ಸಂತುಷ್ಟರಾಗಲು ಹೋಗುವದಿಲ್ಲ, ಸೋಗನ್ನು ಹಾಕಿ ಮೂರ್ತಿಯನ್ನು ಡೌಲಾಗಿಸಿದ ಪೂಜಾರಿಯ ಕಸರತ್ತನ್ನು ನೋಡಲು ಹೋಗುತ್ತಾರೆ. ಹಿಂದಿನವರು ದೇವರಿಗೆಂದು ಮಾಡಿಸಿಟ್ಟ ಆಭರಣಗಳನ್ನು ನೋಡಿ ಮೂಗಿನ ಮೇಲೆ ಬೆರಳಿಟ್ಟುಕೊಳ್ಳಲು ಹೋಗುತ್ತಾರೆ. ಗಣೇಶ ಚವತಿಯ ವೇಳೆಯಲ್ಲಿ ಮನೆಮನೆಗಳಲ್ಲಿ ಕೂಡಿಸಿ ಪೂಜಿಸುವ ಗಣಪತಿ ಯನ್ನು ನೀನು ನೋಡಿಲ್ಲವೆ ? ಸೈಕಲ್ಲ ಮೇಲೆ ಕೂತ ಗಣಪ್ಪ, ಸಾಹೇಬಕಿಯ ಗಣಪ್ಪ, 'ಪಗಡಿ' ಹಾಕಿದ ಗಣಪ್ಪ, 'ಫುಗಡಿ' ಯಾಡುವ ಗಣಪ್ಪ,—ಹೀಗೆ ಗಣೇಶ ಚವತಿಯ ತೆರತೆರನಾದ ಗಣಪ್ಪಗಳನ್ನು ನೋಡಿ ವಿಚಿತ್ರವೆನಿಸು ವದು. ಅದರಂತೆ ವೆಂಕಟೇಶ ದೇವರ ಮತ್ಸ್ಯ-ಕೂರ್ಮಾವತಾರಗಳನು ನೋಡಲು ಗುಡಿಗೆ ಹೋಗುವದೆಂದರೆ ಒಂದು ರೀತಿಯಿಂದ ದಶಾವತಾರದ ಆಟಗಳನ್ನು ನೋಡಿದಂತೆಯೇ ಸರಿ !

ಹೀಗಿದ್ದರೂ ನಾನು ಮೂರ್ತಿಪೂಜೆಯ ಮೇಲೆ ಮುಗಿದು ಬಿದ್ದವನಲ್ಲ. ಅದರಲ್ಲಿ ಒಂದು ಸೊಗಸಿದೆ, ಆನಂದವಿದೆ. ಅರ್ಥವಿದೆ. ಸುಂದರ ವೇಷ-ಭೂಷಣಗಳನ್ನು ನೋಡುವದು ಯಾರಿಗೆ ಬೇಡ ? ಆದರೆ ಈ ನೇತ್ರಾನಂದವೇ ಭಕ್ತಿಯೆಂದು ನಾವು ತಿಳಿದುಕೊಂಡು ಕುಳಿತಿರಬಾರದು. ಅಲ್ಲದೆ ಮೂರ್ತಿಯನ್ನು ನಾವು ದೇವರೆಂದು ತಿಳಿದು ಪೂಜಿಸಿದರೂ ಅದು ಬರಿ ಮೂರ್ತಿಯೆಂಬುದನ್ನು ನಾವು ಮರೆಯಕೂಡದು. ದೇವರು ಸೃಷ್ಟಿಸಿದ ಪ್ರತಿಯೊಂದು ವಸ್ತುವಿನಲ್ಲಿ ಅವನ ಅಂಶವಿದೆ. ರಾಮ, ಕೃಷ್ಣ, ದತ್ತಾತ್ರೇಯರೆಂದರೆ ಯಾರು ? ಅವರೂ ಮಾನವರು; ಆದರೆ ಪೂರ್ಣ ಆತ್ಮಜ್ಞಾನವನ್ನು ಪಡೆದುಕೊಂಡು ಆ ಜ್ಞಾನದಾನವನ್ನು ಮಾಡಿ ಲೋಕಕಲ್ಯಾಣಕ್ಕಾಗಿ ಅವತರಿಸಿದ ಮಾನವರವರು. ಇವರಿಗೇನೆ ನಾವು ಮಹಾಪುರುಷರು ಇಲ್ಲವೆ ಸಂತರೆನ್ನುವದುಂಟು. ಇಂಥ ಎಷ್ಟೋ ಕಾರಣಪುರುಷರ ಆತ್ಮಗಳ ತವರು ಬೆಳಕಾದ ಪರಮಾತ್ಮನನ್ನು ಒಮ್ಮೆಲೆ ಅರಿತುಕೊಳ್ಳುವದು ಕಠಿಣವಾಗುವದು. ಆದ್ದರಿಂದ ಮುಗಿಲು ಎಲ್ಲ ಕಡೆಗೆ ಪಸರಿಸಿದ್ದರೂ ನಮ್ಮ ಪರಿಧಾನದಲ್ಲಿ ಕಂಡುಬರುವ ಮುಗಿಲನ್ನು ನೋಡಿ ಅದರ ಅನಂತತೆಯನ್ನು ತಿಳಿದಂತೆ ಇಂಥ ಮಹಾತ್ಮರನ್ನು ಪೂಜಿಸಿದರೆ ನಮಗೆ ಪರಮಾತ್ಮನ ಸ್ವರೂಪವು ಸುಲಭವಾಗಿ ಗೋಚರವಾಗಬಹುದು. ಇಂಥ ವ್ಯಕ್ತಿಪೂಜೆಯು ನಮ್ಮನ್ನು ದೇವಾರಾಧನೆಗೆ ಒಯ್ದು ಮುಟ್ಟಿಸುವುದು. ಇದಕ್ಕೆ ಸಗುಣಾಕಾರ ಪೂಜೆಯೆನ್ನಬಹುದು. ಬೇರೆ ಬೇರೆಯವರು ಬೇರೆಬೇರೆ ಮೂರ್ತಿಗಳನ್ನು ತಮ್ಮ ಉಪಾಸ್ಯ ದೇವತೆಗಳನ್ನಾಗಿಸಿಕೊಂಡು ಆರಾಧನೆಯಲ್ಲಿ ತೊಡಗುತ್ತಾರೆ. ಕೆಲವರು ಮಾರುತಿಗೊಲಿದರೆ ಕೆಲವರು ರಾಮಚಂದ್ರನಿಗೊಲಿಯುತ್ತಾರೆ.

ಆಧ್ಯಾತ್ಮಿಕ ಜಗತ್ತಿನಲ್ಲಿ ಈ ಯುಗಪುರುಷರೇ ಕಣಸುಗಳಾಗಿ ಬರುತ್ತಾರೆ. ಸಾವಿರಾರು ವರ್ಷಗಳ ಪರಂಪರೆಯು ಅವರ ಜೊತೆಗಿದೆ. ಅನೇಕ ಸಾಧಕರನ್ನು ಈ ಮಹಾಪುರುಷರ ನೆನಪು ಹಾದಿಗೆ ಹಚ್ಚಿದ್ದುಂಟು. ಇಂಥವರಿಂದ ಒದಗಿ ಬರುವ ಸ್ಫೂರ್ತಿಯನ್ನು ಕುರಿತು ಶೆಲ್ಲಿಯು ಹೀಗೆ ಹೇಳಿದ್ದಾನೆ:

ಕಾಲವೆಂಬೀ ನಭೋಮಂಡಲದ ಬೆಳಕುಗಳು—
ಚಿಕ್ಕೆಗಳು—ಗ್ರಹಣ ಹಿಡಿದರು ನಂದಿ ಹೋಗವ್ವೆ !
ಮರಣವೆಂಬಾ ಕೀಳು ಮಂಜು ಮುಸುಕಿಟ್ಟಿರಲು
ಉನ್ನತಿಯನೈದಿ ಮೆರೆಯುವವಿಲ್ಲದಾಗವ್ವೆ !

ಬೆಳಕುಗಾಳಿಗಳಂತೆ ಅವುಗಳಾಗವುನವ್ವೆ
ಮುಸುಕಿಟ್ಟ ಹವೆಯುಲ್ಲಿ; ತರುಣಯೋಗಿಯ ಧ್ಯಾನ
ಮಣ್ಣುಗೂಡನು ಬಿಟ್ಟು ಮೇಲಕೇರುತಿರೆ—ದ್ವೆ—
ನಾಯತ್ತವನು ಪಡೆಯೆ ಬಾಳೊಲುಮೆಗಳು ಬಾನ
ಬಯಲಿನಲಿ ಮಲೆಯುತಿರೆ—ಕಾಣ್ಬುದಿವರಸು
ಯೋಗಿವರರ ಪ್ರಾಣ !

ನಮಗೆ ಕಾಣದ ಜಗತ್ತಿನಲ್ಲಿ ವಿಹರಿಸುವ ಚಕ್ರವರ್ತಿಗಳವರು. ಅವರನ್ನು—ಆಧ್ಯಾತ್ಮಿಕ ಯುಗಗಳ ಈ ಮನುಗಳನ್ನು-ನಾವು ಒಲಿಸದೆ ಪರಮಪದವಿಯನ್ನೆಂತು ಕಂಡೇವು ? ಅಂತೂ ವಿರಾಟರೂಪನಾದ-ನಿರ್ಗುಣಾಕಾರನಾದ ದೇವನನ್ನು ಪ್ರೀತಿಸುವದನ್ನು ಕಲಿಯಲೆಂದು ಅವನ ಅಂಶವಾದ ರಾಮಚಂದ್ರನನ್ನೋ ದತ್ತಾತ್ರಯನನ್ನೋ ನಾನು ಪ್ರೀತಿಸುವೆನು. ಇಂಥ ಪ್ರೀತಿಯನ್ನು ಕಲಿಸಲು ಇಂಥ ಉಪಾಸ್ಯದೇವತೆಯೇ ಗುರುವೆಂದು ಹೇಳಬೇಕಾಗುತ್ತದೆ. ಆದರೆ ಇಂತಹ ಮೂರ್ತಿಪೂಜೆಯಲ್ಲಿ-ನಾವು ತಿಳಿದುಕೊಳ್ಳಲು ಯತ್ನಿಸುವದು ರೂಪವನ್ನು ದಾಟಿ ನಿರ್ಗುಣನಾಗಿರುವ ಪರಮಾತ್ಮನನ್ನು-ಎಂಬ ಮಾತನ್ನು ಮಾತ್ರ ನಾವು ಮರೆಯಕೂಡದು. "ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು" ಎಂದು ನೀನು ಇನೆಯು ಪುಸ್ತಕದಲ್ಲಿ ಓದಿರುವೆ, ಅಂದರೆ—ಆ ಕಲ್ಲಿನ ಮೂರ್ತಿಯೇ ದೇವರೆಂದು ನಾವು ತಿಳಿಯಕೂಡದು. ಅದೊಂದು ಪ್ರತೀಕ. ನಾವು ಪ್ರೀತಿಸುವ ಉಪಾಸ್ಯ ದೇವತೆಯನ್ನು ಅದು ನೆನಪಿಗೆ ತರುತ್ತದೆ. ಉಪಾಸ್ಯದೇವತೆಯು ಪರಮಾತ್ಮನ ಪ್ರತೀಕವಾಗಿದ್ದಾನೆ.

ಉಪಾಸ್ಯದೇವತೆಗಳೆಂದರೆ ಬರಿ ಮಹಾಪುರುಷರಷ್ಟೇ ಅಲ್ಲ. ಆಧ್ಯಾತ್ಮಿಕ ಜಗತ್ತಿನಲ್ಲಿ ಅನೇಕ ಶಕ್ತಿಗಳಿವೆ. ಋಷಿಗಳು ಈ ಶಕ್ತಿಗಳಿಗೆ ಯೋಗ್ಯವಾದ ಪ್ರತೀಕವನ್ನು ಕಂಡುಹಿಡಿದಿದ್ದಾರೆ. ಲಕ್ಷ್ಮೀದೇವಿ, ದುರ್ಗಾದೇವಿ,—ಮೊದಲಾದ ದೈವತಗಳೆಲ್ಲ ಇದೇ ಬಗೆಯವು. ಇವೂ ಸಹ ನಮ್ಮ ಉಪಾಸ್ಯ ದೇವತೆಗಳಾಗಬಹುದು.

ಆದರೆ ಹಳ್ಳಿಗರು ದ್ಯಾಮವ್ವ-ದುರಗವ್ವರನ್ನು ಪೂಜಿಸುತ್ತಾರಲ್ಲ ! ಅದರ ವಿಷಯವೇನೆಂದು ನೀನು ಕೇಳಬಹುದು. ಅದೊಂದು ಕುರುಡ ನಂಬುಗೆಯೆಂದು ಹೇಳಬೇಕಾಗಿ ಬರುತ್ತದೆ. ಕೋಣಗಳನ್ನು ಕಡಿಯೆಂದು

ಕೇಳುವವಳು ಅದೆಂತಹ ದೇವಿ! ನಮ್ಮ ಸಣ್ಣ ಪುಟ್ಟ ಆಸೆಗಳನ್ನು ಪೂರೈಸಿಕೊಡುವವಳು ಅದೆಂತಹ ದೇವಿ! ದೇವರನ್ನು ನಾವು ನಮ್ಮ ಆಸೆಗಳ ಬಾಜಾರು ಬಾಣಗಿನ ಅಂಗಡಿಕಾರನನ್ನಾಗಿ ಮಾಡಬಾರದು. ಅವನ ಮೇಲೆ ಕರಾರಿನ ಹೊರೆಯನ್ನು ಹೇರಬಾರದು. ದೈವದಲ್ಲಿದ್ದದ್ದು ಬಹುಶಃ ತಪ್ಪುವದಿಲ್ಲ. ಮನಸ್ಸಿನ ಸಮಾಧಾನಕ್ಕಾಗಿ ನಾವು ಹುಚ್ಚುಹುಚ್ಚಾಗಿ ಹರಿದಾಡುತ್ತೇವೆ. ಅದರಿಂದ ನಮ್ಮ ದೌರ್ಬಲ್ಯವೇ ವ್ಯಕ್ತವಾಗುತ್ತದೆ. ಪಾಲಿಗೆ ಬಂದದ್ದು ಪಂಚಾಮೃತ; ಪಾಲಿಗೆ ಬರದೆ ಇದ್ದದ್ದು ನಾವು ಸಂಚಯಿಸಬೇಕಾದ ಅಮೃತವೆಂಬ ತತ್ವದವರೆಗೆ ನಾವು ಸಾಗಬೇಕು. ಅದರ ವಿಷಯವೇ ಬೇರೆ. ಇಲ್ಲಿ ನಾವು ಮಾತನಾಡುತ್ತಿರುವದು ಮಾನಸಿಕ ಸಂಸ್ಕೃತಿಯನ್ನು ಸಂಬಂಧಿಸಿದೆ, ವ್ಯವಹಾರವನ್ನಲ್ಲ. ವಿವೇಕಶೂನ್ಯರಾಗಿ ಪರಮಾರ್ಥದಲ್ಲಿ ವ್ಯವಹಾರವನ್ನು ಕೂಡಿಸುವದರಿಂದ ಉಂಟಾಗುವ ಗೊಂದಲವನ್ನು ದೇವರೇ ಬಲ್ಲ. ನೀಲಕಂಠನು ಸಹ ಈ ವಿಷವನ್ನು ನುಂಗಲಾರ. ನಮ್ಮ ದೇಶವು ಹೇಗೆ ಈ ಸ್ಥಿತಿಗೆ ಬಂತೆಂಬುದು ನಿನಗೆ ಗೊತ್ತಿದೆಯೆ? ವ್ಯವಹಾರ—ಪರಮಾರ್ಥಗಳನ್ನು ತಪ್ಪುತಪ್ಪಾಗಿ ಬೆರಸಿದುದರಿಂದ.

ಅಂತೂ ನಿರ್ಗುಣ ಪೂಜೆಯ ನಿರ್ವಯಲಿನ ನಿರ್ವಾಣದಲ್ಲಿ ನಾವು ಉಸಿರಾಡಿಸುವ ಪೂರ್ವದಲ್ಲಿ ಸಗುಣ ಪೂಜೆಯ ಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಮಾತಿಗೆ ನಿನ್ನ ಒಪ್ಪಿಗೆಯಿದೆಯೆಂದು ನಾನು ತಿಳಿದಿದ್ದೇನೆ. ಬಹುಶಃ ಲಗ್ನವಾದ ಎಲ್ಲ ಹೆಂಗಳೆಯರೂ ವ್ಯಕ್ತಿಪೂಜೆಯ ದಾರಿಯನ್ನೇ ಹಿಡಿಯುತ್ತಾರೆ! ಗಂಡೂ ಅದೇ ಹಾದಿಯನ್ನು ಹಿಡಿಯಹತ್ತಿರುವದು ಈ ಯುಗದ ಸುಲಕ್ಷಣವೆಂದೇ ಹೇಳಬೇಕು.

ನಿನ್ನೊಲವಿನ,

**ವನಮಾಲಿ**

# ಓಲೆ (೬) ಪ್ರೇಮ

ಪ್ರಿಯ ಲಲಿತಾ,

ಹಿಂದೆ ನಾನು ಭಕ್ತಿಯೋಗವನ್ನು ಕುರಿತು ಬರೆದೆ. ದೇವರ ನಿಜ ಸ್ವರೂಪವನ್ನು ತಿಳಿದುಕೊಳ್ಳಲು ಇದು ಒಂದು ಮುಖ್ಯವಾದ ದಾರಿಯೆಂದು ನಿನಗೆ ಮನವರಿಕೆಯಾಯಿತಷ್ಟೆ? ಆದರೆ ಇದರಷ್ಟೆ ಅರ್ಥಪೂರ್ಣವಾದ ಟಿಸಿಲುದಾರಿಯೊಂದಿದೆ. ಅದಕ್ಕೆ ಪ್ರೇಮಯೋಗವೆಂದು ಹೆಸರು. ಈ ವಿಷಯವನ್ನು ಈ ಮೊದಲೆ ನಿನ್ನೊಡನೆ ಮಾತನಾಡಿದ್ದೇನೆ. ಇಲ್ಲಿ ಅದನ್ನೇ ಕುರಿತು ಬರೆಯುತ್ತೇನೆ.

ದೇವರ ಸ್ವರೂಪವಂತೂ ವಿಶ್ವವನ್ನು ಮೀರಿ ಉಳಿದಿದೆ. ಅಂದಮೇಲೆ ಅದನ್ನು ಪ್ರೀತಿಸಲು ಕಲಿಯುವದು ಸಣ್ಣ ಕೆಲಸವಲ್ಲ. ಪ್ರೀತಿಯೆಂದರೆ, ಇಂಥದೊಂದು ವಸ್ತುವಿನ ಪೂರ್ಣ ಜ್ಞಾನವೆಂದರ್ಥ. ಈಗ ನೀನು ನಿನ್ನ ತಾಯಿಯನ್ನು ಪ್ರೀತಿಸುವಿ. ಅಂದರೆ ನೀನು ನಿನ್ನ ತಾಯಿಯು ನಿನಗೆ ಹುಟ್ಟಿದಂದಿನಿಂದ ಮಾಡಿದ ಆರೈಕೆಯನ್ನು ನೆನಪಿನಲ್ಲಿಟ್ಟಿರುವಿ; ಅವರು ಪರೋಪರಿಯಿಂದ ನಿನ್ನನ್ನು ಲಾಲಿಸಿ ಪಾಲಿಸಿದ್ದು ನಿನ್ನ ಸ್ಮರಣದಲ್ಲಿದೆ; ಅವರು ನಿನ್ನ ಮೇಲೆ ಮಾಡುವ ಪ್ರೀತಿಗೂ ಅವರ ಸ್ವಭಾವಕ್ಕೂ ನೀನು ಒಲಿದಿರುವೆ; ಇದಲ್ಲದೆ ಇವಳು ನನ್ನ ತಾಯಿ ಎಂಬ ಸಹಜ ಪ್ರೀತಿಯೂ ನಿನ್ನಲ್ಲಿದೆ. ಈ ರೀತಿಯಾಗಿ ನೀನು ನಿನ್ನ ತಾಯಿಯ ಗುಣಗಳನ್ನು ಪೂರ್ಣವಾಗಿ ಅರಿತಿರುವೆ; ಕಾರಣ ಅವರನ್ನು ಪ್ರೀತಿಸುವೆ.

ಆದರೆ ದೇವರ ವಿಷಯಕ್ಕೆ ಈ ತರಹದ ಪೂರ್ಣ ಜ್ಞಾನವಾಗುವದು ಒಮ್ಮೆಲೆ ಶಕ್ಯವಿಲ್ಲ. ಏಕೆಂದರೆ ಮೊದಲು ಅವನ ಗುಣಗಳ ಪೂರ್ಣ ಪರಿಚಯವಾದ ಮೇಲೆ ಅವನಲ್ಲಿ ಪ್ರೀತಿ ಹುಟ್ಟುವದು. ಇನ್ನು ಈ ದೇವನ ನಿಜ ಸ್ವರೂಪವನ್ನು ಅರಿತುಕೊಳ್ಳಲು ಒಂದು ಸುಲಭವಾದ ಹಾದಿಯಿದೆ. ಅವನ ಅಂಶವಾದ ಆತ್ಮವು ನನ್ನಲ್ಲಿಯೂ ಇದೆ; ನಿನ್ನಲ್ಲಿಯೂ ಇದೆ; ಎಲ್ಲರಲ್ಲಿಯೂ ಇದೆ. ಪ್ರತಿಯೊಬ್ಬ ಮಾನವನ ಹೃದಯದಲ್ಲಿ ದೇವರ ಅಂಶವಾದ ಆತ್ಮವು

ಹೊಳೆಯುವ ರತ್ನದಂತೆ ಅಡಗಿರುತ್ತದೆ. ಅದನ್ನು ನಾವು ಪ್ರೀತಿಸಲು ದೇವ ನನ್ನು ಪ್ರೀತಿಸಿದಂತಾಗುವದಿಲ್ಲವೆ? ಅವನ ಗುಣಗಳನ್ನು ತಿಳಿಯತೊಡಗಿ ದಂತಾಗುವದಿಲ್ಲವೆ ? ದೇವನನ್ನು ಪ್ರೀತಿಸಿ ಅವನಲ್ಲಿ ಪೂರ್ಣವಾಗಿ ಬೆರೆತು ಕೂಡಿ ಒಂದಾಗಿ ಹೋಗುವದೇ ನಮ್ಮ ಧ್ಯೇಯವಿದೆ. ಅವನ ಅಂಶವಾದ ಒಂದು ಆತ್ಮ ಇಲ್ಲವೆ ಜೀವದ ಕೂಡ ನಾವು ಮೊದಲು ಒಂದಾಗಲು ಕಲಿತೆ ವೆಂದರೆ ಆ ಉಚ್ಚ ಧ್ಯೇಯವು ಸಹಜವಾಗಿ ಸಾಧಿಸುವದು.

ದೇವರ ಸಾಕ್ಷಾತ್ಕಾರವನ್ನು ಪಡೆಯುವದೆಂದರೆ ಅವನ ಎಲ್ಲ ಗುಣ ಗಳನ್ನು ತಿಳಿದುಕೊಂಡು ಅವನ ಮೇಲೆ ನಮ್ಮ ಪ್ರೇಮದ ಮಳೆಯನ್ನು ಸುರಿಸಿ ಅವನ ಪ್ರೇಮವನ್ನು ಪ್ರತಿಯಾಗಿ ದೊರಕಿಸಿ ಅವನೊಡನೆ ಒಂದಾಗಿ ಕೂಡಿ ಹೋಗುವದೇ ಸರಿ. ಮಾನಸ್ಸಿನಲ್ಲಿ ದೇವರ ವಿಷಯಕ್ಕೆ ಈ ತರಹದ ಪ್ರೇಮವು ಬಂದಿತೆಂದರೆ ಹೀಗೆ ನಮಗೆನಿಸಿಸಹತ್ತುವದು: “ ನಾನು ಈ ದೇಹ ವಲ್ಲ; ಅದು ಕೆಲವು ವರ್ಷಗಳಾದ ಮೇಲೆ ಮಣ್ಣುಗೂಡಿ ಹೋಗುವದು; ನಾನು ಈ ಮನಸ್ಸಲ್ಲ; ಏಕೆಂದರೆ ಅದು ಕ್ಷಣಮಾತ್ರವಾಗಿ ಈ ಜೀವನವು ಮುಗಿಯುವತನಕ ಇಲ್ಲಿದೆ; ಆದರೆ ನಾನು ಒಂದು ಜೀವ, ಒಂದು ಆತ್ಮ. ನಾನು ‘ದೇವರೆ’ಂದು ಹೆಸರಾಂತ ತೇಜೋರಾಶಿಯಿಂದ ಹಾರಿಬಂದ ಒಂದು ಕಿಡಿ; ನನಗೆ ಜನ್ಮವೂ ಇಲ್ಲ. ಮರಣವೂ ಇಲ್ಲ. ಹೀಗೆ ಒಂದಾದ ಮೇಲೆ ನನಗೆ ದೇಹವಿದ್ದರೂ ಇಲ್ಲದಂತೆಯೇ ಸರಿ; ಅದು ನಿಮಿತ್ತ ಮಾತ್ರವಾದುದು. ಸಮುದ್ರದ ನೀರು ಉಗಿಯಾಗಿ ಎದ್ದು, ಮಳೆಯಾಗಿ ಬಿದ್ದು, ನದಿಯಾಗಿ ಹರಿದು ಮತ್ತೆ ಸಮುದ್ರವನ್ನು ಕೂಡುವಂತೆ ಮನುಷ್ಯಜನ್ಮವನ್ನು ಧರಿಸಿದ ನಾನು ದೇವದೇವನೊಡನೆ ಒಂದಾಗಿಹೋಗುವೆನು; ಇದೇ ಭಕ್ತಿ; ಇದೇ ಮುಕ್ತಿ; ಇದನ್ನು ಅರಿಯದ ಮನುಷ್ಯನು ನರಪಶುವೇ ಸರಿ” ಹೀಗೆ ನಮಗೆ ನಿಸಹತ್ತಿತೆಂದರೆ ದೈವಿಕತೆಯು ನಮಗೆ ಕಾಣಿಸಿಕೊಳ್ಳಹತ್ತಿತೆಂದು ತಿಳಿದರೆ ತಪ್ಪಲ್ಲ.

ಆದರೆ ದೇವನೊಡನೆ ಈ ತರಹದ ಪ್ರೇಮವನ್ನು ಬೆಳಿಸುವದಕ್ಕಿಂತ ಮೊದಲು ನಾವು ಅವನ ಒಂದು ಅಂಶವನ್ನು ಪ್ರೀತಿಸಲು ಕಲಿಯಬೇಕು. ಅಗಸ್ತ್ಯನಂತೆ ಇಡಿಯ ಸಮುದ್ರದ ನೀರನ್ನೇ ಕುಡಿಯುವದಕ್ಕಿಂತ ಮೊದಲು ಒಂದು ಬೊಗಸೆ ನೀರನ್ನು ಕುಡಿಯಲು ಕಲಿಯಬೇಕು. ಅಂದರೆ ಮುಂದೆ

ಸಮುದ್ರವನ್ನು ಕುಡಿಯಲು ಯತ್ನಿಸಬಹುದು. ಸಾಧನೆಯಂತೆ ಸಿದ್ಧಿಯು ಇದ್ದೇ ಇರುವದು.

**ಹಾಗಾದರೆ ದೇವರ ಒಂದು ಅಂಶವು ನಮಗೆಲ್ಲಿ ದೊರಕುವದು?:**—ಇದಕ್ಕೆ ಉತ್ತರವೇನು ಗೊತ್ತಿದೆಯೇ ? ಪ್ರತಿಯೊಂದು ಜೀವದಲ್ಲಿ. ಪ್ರತಿಯೊಬ್ಬ ಮನುಷ್ಯನಲ್ಲಿ ದೇವರ ಅಂಶವಾದ ಈ ಆತ್ಮವಿರುವದು. ಅನೇಕ ಸಾಧು ಸಂತರು ಇಡಿಯ ಜಗತ್ತನ್ನೇ ಪ್ರೀತಿಸುವರು. ಅವರು ಎಲ್ಲರನ್ನೂ ತಮ್ಮ ಬಂಧು-ಭಗಿನಿಯರಂತೆ ಕಾಣುವರು. ಇಂದಿನ ಮಹಾತ್ಮಾ ಗಾಂಧಿ ಹಾಗು ಶ್ರೀ ಅರವಿಂದರ ತತ್ವಗಳಾದರೂ ಇವೇ ಇರುವವು. ಅವರು ಎಲ್ಲರನ್ನು ಅಣ್ಣ-ತಮ್ಮಂದಿರಂತೆ ನೋಡುವರು 'ಇದು ನಮ್ಮ ದುಡ್ಡು, ಇದು ಪರರದು' ಎಂದು ಅವರಿಗೆನಿಸುವದಿಲ್ಲ. ತಮ್ಮ ಸರ್ವಸ್ವವನ್ನೂ ಅವರು ದಾನಮಾಡಿ ಬಿಡುತ್ತಾರೆ. 'ಎಲ್ಲರೂ ದೇವರ ಮಕ್ಕಳು; ಎಲ್ಲರಲ್ಲಿಯೂ ಪ್ರೇಮದಿಂದ ವರ್ತಿಸಬೇಕು? ಹೀಗೆ ಹೇಳುತ್ತ ಅವರು ಜಗತ್ತಿನಲ್ಲಿಯ ಎಲ್ಲ ಆತ್ಮಗಳೊಡನೆ ಒಂದಾಗುತ್ತ ಕಡೆಗೆ **ಪರಮಾತ್ಮನೊಡನೆ** ಒಂದಾಗುತ್ತಾರೆ ಅವರಿಗೆ ಯಾವ ತರಹದ ಅಹಂಕಾರವೂ ಇರುವದಿಲ್ಲ; ಯಾವುದರ ಪರಿವೆಯೂ ಇರುವದಿಲ್ಲ. ಜಗತ್ತೇ ಅವರ ಮನೆ; ಅದರಲ್ಲಿ ಇರುವ ಜನರೆಲ್ಲ ಅವರ ಬಂಧು-ಮಿತ್ರರು. ನಾವಾದರೂ ಅವರಂತೆ ಎಲ್ಲರೊಡನೆ ಪ್ರೇಮದಿಂದ ವರ್ತಿಸಲು ಯತ್ನಿಸಬೇಕು.

ಆದರೆ ಈ ಮಹಾಪುರುಷರಷ್ಟು ಸ್ವಾರ್ಥತ್ಯಾಗಿಗಳಾಗಲು ಎಲ್ಲರಿಗೂ ಸಾಧ್ಯವಿರುವದಿಲ್ಲ. ಆದ್ದರಿಂದ ಜಗತ್ತಿನ ಎಲ್ಲ ಜನರೊಡನೆ ಒಂದಾಗುವದಕ್ಕಿಂತ ಮೊದಲು ಅವರು ಒಂದೇ ಒಂದು ಜೀವವನ್ನು ಪ್ರೀತಿಸಿ ಅದರ ಗುಣಗಳನ್ನೂ ದೇವಾಂಶವನ್ನೂ ಅರಿತು ಅದರೊಡನೆ ಒಂದಾಗಲು ಯತ್ನಿಸುತ್ತಾರೆ. ಅವರ ಮುಖ್ಯ ಮಂತ್ರವೆಂದರೆ—**ಪ್ರೇಮ.**

ಮೇಲೆ ಹೇಳಿದಂತೆ ಪ್ರತಿಯೊಬ್ಬ ಮಾನವನಲ್ಲಿಯೂ ದೇವರ ಅಂಶವಿರುವದಷ್ಟೆ ? ಇದೇ ತತ್ವವನ್ನನುಸರಿಸಿ ನಾನು ಮೊದಲು ಒಂದೇ ಒಂದು ಜೀವವನ್ನು ಪ್ರೀತಿಸಲು ಯತ್ನಿಸಿದೆನು. ಆ ಜೀವ ಯಾರೆಂದರೆ,—ನನ್ನ ಗೆಳೆಯ. ಅವನೊಡನೆ ನಾನು ಪೂರ್ಣವಾಗಿ ಒಂದಾಗಿ ಹೋದೆ. ಅವನ ತಾಯಿಯೆಂದರೆ ನನ್ನ ತಾಯಿ; ಅವನ ಅಪ್ಪರೆಂದರೆ ನನ್ನ ಅಪ್ಪರು.

ನಾವೀರ್ವರು ಕೂಡಿಯೇ ಇರುತ್ತಿದ್ದೆವು. ನನ್ನ ಹಣವೇ ಅವನ ಹಣ. ಯಾವ ತರಹದ ಭೇದವೇ ಇರಲಿಲ್ಲ. ನಮ್ಮೀರ್ವರ ಆತ್ಮಗಳು ಒಂದಾಗಿ ಹೋಗಿದ್ದವು. ಸಾವು ಬಂದರೂ ನಾವು ಬೇರೆಯಾಗಲಾರೆವು. ಅವನನ್ನು ಪ್ರೀತಿಸಿದರೆ ದೇವನನ್ನು ಪ್ರೀತಿಸಿದಂತೆಯೇ ಸರಿ. ಅಷ್ಟು ಆನಂದವಾಗು ತ್ತಿತ್ತು. "ದೇವರ ಒಂದು ಅಂಶವೇ ಇಷ್ಟು ಮಧುರವಿದ್ದ ಮೇಲೆ ದೇವರು ಎಷ್ಟು ಮಧುರವಿರಬೇಡ" ವೆಂದು ಅನಿಸುತ್ತಿತ್ತು. ಹೀಗೆ ಈ ನಮ್ಮ ಪ್ರೇಮಯೋಗವು ನಮ್ಮಲ್ಲಿ ದೇವರ ವಿಷಯಕ್ಕೆ ಪ್ರೇಮವನ್ನು ಹುಟ್ಟಿಸಿತು. ಗೆಳೆತನವೆಂದರೆ ಈ ತರಹದ ಪ್ರೇಮಯೋಗವೇ ಹೊರತು ಬರಿಯ ಗುರುತು-ಪರಿಚಯುವಲ್ಲ.

ಆದರೆ ಹಿಂದೆ ಹೇಳಿದಂತೆ ನಾನು ಮದುವೆಯಾಗಲೇ ಬೇಕಲ್ಲ? ನನ್ನ ಸಹಧರ್ಮಿಣಿಯೆಂದರೆ ನನ್ನ ಗೆಳತಿಯಾಗಬೇಕು. ಅವಳು ಈ ಪ್ರೇಮ ಯೋಗದ ಗುರಿಯನ್ನು ತಿಳಿದುಕೊಂಡಿರಬೇಕು. ಅವಳು ನನ್ನಲ್ಲಿರುವ ದೇವಾಂಶವನ್ನು ಪ್ರೀತಿಸಬೇಕು. ಇಂಥವಳು ಎಲ್ಲಿ ಸಿಗಬೇಕು? ನಿನ್ನನ್ನು ನೋಡಿದಾಗಲೆ ಇದನ್ನು ತಿಳಿಯಲು ನೀನು ತಕ್ಕವಳೆಂದು ನನಗೆ ತೋರಿತು. ಆಗ ನಾನು ನಿನ್ನನ್ನು ಮದುವೆಯಾದೆನು.

ಈಗಾದರೂ ನಿನಗೆ ಪ್ರೇಮಯೋಗವೆಂದರೇನೆಂಬುದು ತಿಳಿಯಿತೆ? ನಿನ್ನನ್ನು ನಾನು ಸಹಜವಾಗಿ ಪ್ರೀತಿಸಹತ್ತಿದೆನು. ಈ ರೀತಿಯಾಗಿ ಪ್ರೀತಿ ಸಲು ಕಾರಣವೇನೆಂಬುದನ್ನು ನೀನು ಬಲ್ಲೆಯಾ? ನಾನು ನಿನ್ನ ರೂಪಕ್ಕೆ ಮೆಚ್ಚಲಿಲ್ಲ. ನಿನ್ನ ಮೋರೆಯ ಮೇಲಿರುವ ಸದ್ಗುಣದ ಕಳೆಗೆ ಮೆಚ್ಚಿದೆ. ನಿನ್ನ ಸೌಂದರ್ಯಕ್ಕೆ ಸೋಲಲಿಲ್ಲ. ಆದರೆ ನಿನ್ನಲ್ಲಿ ಈ 'ಆತ್ಮದ' ಜಾಗೃತಿ ಯಿರಬಹುದೆಂದು ನಿನಗೊಲಿದೆ.

ನಾವೀರ್ವರೆಂದರೆ ದೇವರ ಎರಡು ಅಂಶಗಳು, ಎರಡು ಆತ್ಮಗಳು. ನಮ್ಮ ದೇಹಗಳು ಬೇರೆಯಾಗಿರಬಹುದು. ನಮ್ಮ ಉದ್ಯೋಗಗಳು ಬೇರೆ ಯಾಗಬಹುದು. ನಾನು ಹೊರಗೆ ಕೆಲಸಮಾಡಿ ಹಣ ತಂದರೆ ನೀನು ಮನೆ ಕೆಲಸವನ್ನು ನೋಡಿಕೊಳ್ಳಲು ಮನೆಯಲ್ಲಿರಬಹುದು. ಆದರೆ ಆ ದಿವ್ಯ ಜ್ಞಾನವು ಒಂದೇ ರೀತಿಯದು. ಅದನ್ನು ಪಡೆಯಲು ನಮ್ಮ ಪ್ರಯತ್ನಗಳು

ಒಂದೇ ರೀತಿಯುವಿರಬೇಕು. ಶುದ್ಧವಾದ, ನಿಷ್ಕಲಂಕವಾದ ಪ್ರೀತಿಯೇ ಇದಕ್ಕೆ ಮುಖ್ಯ ಹಾದಿ.

ಇನ್ನೊಮ್ಮೆ ಹೇಳುವೆ: ಪ್ರೀತಿಯೆಂದರೆ ಬರಿಯ ವಿಷಯುಲೋಲುಪತೆಯಲ್ಲ; ಜೊತೆಗಾರನು ವಿದ್ಯಾವಂತನೂ ಐಶ್ವರ್ಯವಂತನೂ ಇರುವನೆಂದು ಜೊತೆಗಾರ್ತಿಯು ಆವನ ಮೇಲೆ ಮಾಡುವ ಮಮತೆಯಲ್ಲ. ಆದರೆ ಈ ದೇವಾಂಶವನ್ನು ಗುರುತಿಸಿ-ಅದನ್ನು ಕಂಡುಹಿಡಿಯುವದೇ ನಮ್ಮ ಜೀವದ ಮುಖ್ಯ ಕಾರ್ಯವೆಂದೆಣಿಸಿ- ಅದರ ಮೇಲೆ ನಾವು ಸುರಿಸುವ ಅಂತಃಕರಣದ ಮಳೆಯೇ ಪ್ರೀತಿ.

ಪ್ರಿಯ ಲಲಿತೆ ! ಪೂರ್ಣಯೋಗದಲ್ಲಿ ಇಂಥ ಒಂದು ಹೆಜ್ಜೆಯನ್ನಾದರೂ ನಾವು ಇಡೋಣ. ನಿನ್ನ ಮೇಲೆ ನನ್ನ ಎಲ್ಲ ಭಾರವಿದೆ; ನನ್ನ ಎಲ್ಲ ಧ್ಯೇಯಗಳ ಫಲದ ಪುಣ್ಯವಿದೆ. ಇದನ್ನು ನೀನು ತಿಳಿದಿದ್ದೀಯೆ. ಅಂತೇ ನಾನು ನನ್ನ ಭಾಗ್ಯರವಿಯು ಉದಯವಾಯಿತೆಂದು ನಂಬಿದ್ದೇನೆ. ಒಮ್ಮೊಮ್ಮೆ ನನ್ನ ಉದ್ದೇಶಗಳು ಸಫಲವಾಗುವವೋ ಇಲ್ಲವೋ ಎಂಬ ಸಂಶಯವು ನನ್ನನ್ನು ಬಲವಾಗಿ ಬಾಧಿಸುತ್ತಿದೆ. ನಿನಗೆ ಹೇಗೆ ಹೇಳಿದರೆ ಈ ನನ್ನ ವಿಚಾರಗಳು ನಿನ್ನಲ್ಲಿ ಒಡಮೂಡುವವೋ ಎಂಬುದೇ ನನಗೆ ತಿಳಿಯದಾಗಿದೆ. ಆದರೂ ನಿನ್ನಲ್ಲಿ ನನಗೆ ವಿಶ್ವಾಸವಿದೆ; ನಿನ್ನ ಮೇಲೆ ನನ್ನ ಪ್ರೀತಿಯಿದೆ. ಅದರಿಂದಲೇ ನಾನು ಧೈರ್ಯ ತಾಳಿ ಈಗ ನಿನಗೆ ಇದನ್ನೆಲ್ಲ ಹೇಳುತ್ತಿದ್ದೇನೆ. ನೀನು ನನ್ನ ಕೈವಲ್ಯದ ರಾಣಿಯಾಗಿರುವೆ. ನನ್ನ ಗೃಹಲಕ್ಷ್ಮಿಯಾದೆ. ನನ್ನ ಸರಸ್ವತಿಯಾದೆ. ನನ್ನ ಸರ್ವಸ್ವವಾದೆ. ಎಲ್ಲರಲ್ಲಿಯೂ ದೇವಾಂಶವಿರುವದು ನಿಜ. ಆದರೆ ನಿನ್ನ ಮೇಲೆ ನನ್ನ ಪ್ರೀತಿಯು ಹೆಚ್ಚಾಗಿದ್ದುದರಿಂದ ಅದು ನಿನ್ನಲ್ಲಿ ನನಗೆ ಹೆಚ್ಚು ಸ್ಪಷ್ಟವಾಗಿ ಕಂಡುಬರಹತ್ತಿದೆ. ಅದಕ್ಕಂತೇ ನಾನು ನಿನಗೆ ಒಲಿದಿರುವೆ. ನೀನೂ ನನ್ನನ್ನು ಅದೇ ರೀತಿಯಿಂದ ಪ್ರೀತಿಸುವಿಯೆಂದು ನನಗೆ ಗೊತ್ತಿದೆ. ನನ್ನ ನಿನ್ನ ಪ್ರೇಮವು ಚಿರಕಾಲವಿರಲಿ ! ನಮ್ಮ ಗೆಳೆತನವು ಬೆಳೆದು ಹೆಮ್ಮರವಾಗಲಿ. ಈ ನಮ್ಮ ಪ್ರೇಮವು ನಮಗೆ ದೈವಿಕತೆಯನ್ನು ತಿಳಿಯಪಡಿಸಿ ನಮ್ಮ ಮನಸ್ಸು ಚೇತನಗೊಳಿಸಲಿ !!

ನನ್ನ ಹೃದಯಮಂದಿರವನ್ನು ಅಲಂಕರಿಸುವ ದೇವಿಯೆ ! ನನ್ನ ಮನಸ್ಸೆಂಬ ಗುಡಿಯಲ್ಲಿ ಆದಿಯಲ್ಲಿಯೇ ನೆಲೆಸಿದ ಆದಿಮಾಯೆ ! ನಿನ್ನನ್ನು

ಏನೆಂದು ಕರೆದರೂ ನನ್ನ ಪ್ರೀತಿ ತೀರದು. ನಿನ್ನನ್ನು ಎಷ್ಟು ಮನ್ನಿಸಿದರೂ ನನ್ನ ಜೀವಕ್ಕೆ ಸಾಲದು. ನಿನ್ನ ಹೆಸರನ್ನು ಎಷ್ಟು ಸಲ ನೆನಿಸಿದರೂ ನನ್ನ ಹಸಿವೆಯು ಹಿಂಗದು. ನೀನೆ ನನ್ನ ಪಾಲಿಗಿರುವ ದೇವರು. ನೀನೇ ನನ್ನ ಸರ್ವಸ್ವ ನನ್ನ ಕೀರ್ತಿಯು ನಿನ್ನದು. ನನ್ನ ಸ್ಫೂರ್ತಿಯು ನಿನ್ನದು. ನನ್ನ ಜೀವನವೇ ನಿನ್ನದು. ಆತ್ಮಕ್ಕೆ ಸಾವಿಲ್ಲ. ಆತ್ಮದ ಪ್ರೀತಿಗೆ ಸಾವಿಲ್ಲ. ನಾವು ತೀರಿದರೂ ನಮ್ಮ ಪ್ರೇಮವು ಉಳಿದೇ ಉಳಿಯುವದು; ನಮ್ಮ ಆತ್ಮಗಳು ಉಳಿದೇ ಉಳಿಯುವವು. ಉಳಿದು ಒಂದನ್ನೊಂದು ಕೂಡಿ ಕಡೆಗೆ ದೈವಿಕತೆಯಲ್ಲಿ ಬೆರೆತು ಹೋಗುವವು! ಇದು ನಿಶ್ಚಯ. ಅಂತೇ ಇದನ್ನೆಲ್ಲ ನಾನು ನಿನಗೆ ಬರೆಯುತ್ತಿರುವೆನು. ನೀನೆಂದರೆ ದೇವರು ತನ್ನನ್ನು ಅರಿಯುವದಕ್ಕೆ ನನಗೆ ಕಾಣಿಕೆಯಾಗಿ ಕೊಟ್ಟ ಒಂದು ಕುರುಹೆಂದು ತಿಳಿದಿರುವೆನು. ಹುಣ್ಣಿಮೆಯ ಚಂದ್ರಮನು ಬರುವದಕ್ಕಿಂತ ಮೊದಲು ಆತನು ಬಿದಿಗೆಯ ಚಂದ್ರನಾಗುವದಿಲ್ಲವೆ? ನೀನೇ ನನ್ನ ಬಿದಿಗೆಯ ಚಂದ್ರಮ. ದೈವಿಕತೆಯೇ ನಿನ್ನನ್ನು ಹಿಂಬಾಲಿಸುವ ಹುಣ್ಣಿಮೆಯ ಚಂದ್ರ! ಮೊದಲು ಬಿದಿಗೆಯ ಬೆಳಕನ್ನು ನೋಡಿದ ನಾನು ಹಿಂದುಗಡೆ ಹುಣ್ಣಿಮೆಯ ಚಂದ್ರನನ್ನು ನೋಡಿ ನಲಿದಾಡುವೆನು.

ನಮ್ಮ ಜೀವನಕ್ಕೆ ದೇಶಕಾಲಗಳ ನಿರ್ಬಂಧವಿರಲಾರದು. ನಾವು ಹಿಂದುಸ್ತಾನದಲ್ಲಿ-ಅದರಲ್ಲಿಯೂ ಕನ್ನಡ ನಾಡಿನಲ್ಲಿ ಹುಟ್ಟಿರುವದು ನಿಜ. ಆದರೆ ಇಷ್ಟು ಮಾತ್ರಕ್ಕೆ ನಾವು ಬರಿ ಇಂಥದೊಂದು ದೇಶದವರೆಂದ ಹಾಗಾಗಲಿಲ್ಲ. ಈ ಲೋಕವೆಲ್ಲ ಒಂದು ಮನೆ, ದೇವರೇ ಅದರ ಯಜಮಾನ, ನಾವೆಲ್ಲ ಆವನ ಮಕ್ಕಳು. ನಾವು ಇಂಥದೊಂದು ದೇಶದಲ್ಲಿ ಜನ್ಮವೆತ್ತಿದ್ದರೂ ಇಡಿಯ ಸೃಷ್ಟಿಯೇ ನಮ್ಮ 'ಆಡುಂಬೊಲ.' ೨೦ ನೆಯ ಶತಮಾನವು ನಮ್ಮದಿದ್ದರೂ ಸ್ವಯಂಪ್ರಕಾಶರೂಪನು ಎಂದಿದ್ದನೋ ಅಂದಿನಿಂದ ನಾವೂ ಇದ್ದೆವು. ನಮ್ಮಲ್ಲಿ ಚಿಗಿತ ಅರಿವು ಕೊನರಿ ಫಲವಾಗುವತನಕ ಹುಟ್ಟು-ಸಾವುಗಳ ಲೀಲೆಯಿದು ಹೀಗೆಯೇ ಸಾಗಬೇಕೆಂದು ತೋರುತ್ತದೆ. ನಿರಾಕಾರ ಸುಭಗನನ್ನು ನಾವು ವರಿಸುವ ತನಕ ಅನೇಕ ಮದುವೆ-ಮಂಟಪಗಳೊಳಗಿಂದ ನಾವು ಹಾಯಬೇಕಾಗಿ ಬರಬಹುದು.

ನಮ್ಮ ಬಾಳು ನಶ್ವರವೆಂಬುದು ನಿಜ. ಆದರೆ ನಮ್ಮ ಪ್ರೀತಿಯಿದು ತೀರಿ ಹೋಗುವ 'ನಾಮ'ಗಳ ನಡುವಿರುವದಿಲ್ಲ. ನಮ್ಮಲ್ಲಿ ಪರಂಜ್ಯೋತಿಯಂತೆ ಬೆಳಗುತ್ತಿರುವ ಆತ್ಮಗಳ ಮಧುರ ಸಂಬಂಧವದು. ಆತ್ಮಗಳಂತೆ ಪ್ರೀತಿಯೂ ಮರಣರಹಿತವಾದುದು. ಪರಮಾತ್ಮನೆಡೆಗೆ ನಮ್ಮನ್ನು ಕರೆದೊಯ್ಯುವ ಸೋಪಾನವೇ ಪ್ರೀತಿ. ಎಲ್ಲ ಆದರ್ಶಗಳಲ್ಲಿ ವಿಶ್ವಾಸವನ್ನು ಕಳೆದುಕೊಂಡಿರುವ ಇಂದಿನ ನಾಗರಿಕತೆಗೆ ಪ್ರೀತಿಯು ಒಳ್ಳೆಯ ಮದ್ದಾಗಿ ಪರಿಣಮಿಸುವದರಲ್ಲಿ ಸಂದೇಹವಿಲ್ಲ. ಇಂಥ ಪ್ರೀತಿಯಲ್ಲಿಯೇ ನಮ್ಮ ಪರಂಪರೆಯು ಬೆಳೆಯಲಿ.

ಸಸ್ನೇಹಲವಿನ,

**ವನಮಾಲಿ**

# ಓಲೆ (೭) ಜ್ಞಾನ

ಪ್ರಿಯ ಲಲಿತಾ,

ಹಿಂದಿನ ಪತ್ರದಲ್ಲಿ ನಮ್ಮ ಪ್ರೀತಿಗೊಂದು ಉದ್ದೇಶವನ್ನು ನಾನು ಕಲ್ಪಿಸಿಕೊಟ್ಟೆ. ಅದಕ್ಕೆ ಪ್ರತಿಯಾಗಿ ನೀನು ಬರೆದುದನ್ನು ಓದಿ ನನ್ನ ಮನಸ್ಸಿನಲ್ಲಿ ಹುಚ್ಚು ಹಿಗ್ಗಿನ ಹೊಳೆಯೊಂದು ಹರಿಯಿತು. ಆ ಹುಚ್ಚಿನ ಭರದಲ್ಲಿಯೇ ನಾನು ನನ್ನ ಕೋಣೆಯಲ್ಲಿ ಗಟ್ಟಿಯಾಗಿ ಕೂಗಾಡಿದೆ, ಒದರಿದೆ. ಆಗ ಪಕ್ಕದ ಕೋಣೆಯಲ್ಲಿದ್ದವರು ಗಾಬರಿಯಾಗಿ ಬಂದರು. ಅವರನ್ನು ಸಮಾಧಾನ ಪಡಿಸಿ ಅವರ ಕ್ಷಮೆ ಬೇಡಿ ಅವರನ್ನು ತಿರುಗಿ ಕಳಿಸಬೇಕಾದರೆ ನನಗೆ ಸಾಕು ಬೇಕಾಗಿ ಹೋಯಿತು. ಹೇಗಿದೆ ನಿನ್ನ ಪತ್ರದ ಮಹಿಮೆ!

ಪ್ರೀತಿಯು ನಮ್ಮ ಗುರಿಯಿದ್ದಾಗ ನಾನು ಇಷ್ಟೆಲ್ಲ ಕಲಿಯುವದೇತಕ್ಕೆಂದು ಕೇಳುವದು ಸಹಜವಿದೆ. ಆ ಪ್ರಶ್ನೆಯನ್ನು ನನ್ನಷ್ಟಕ್ಕೆ ನಾನೇ ಅನೇಕ ಸಲ ಕೇಳಿಕೊಂಡಿದ್ದೇನೆ. ಕಲಿಯುವಿಕೆಯಿಂದ ಹೊಟ್ಟೆಯ ಸಮಸ್ಯೆಯು ಕೂಳಿಲ್ಲದ ನಮ್ಮ ಈ ದೇಶದಲ್ಲಿ ಬಿಡಬಹುದೆಂಬುದು ಅದಕ್ಕೆ ಉತ್ತರವಾಗಿದೆ. ಇದಕ್ಕೂ ಮುಖ್ಯವಾದ ಮಾತೆಂದರೆ— ಜ್ಞಾನಪ್ರಯೋಗ!

ಓದಿ ಮರುಳಾಗಬಾರದು. ಓದದೆಯೂ ಮರುಳಾಗಬಾರದು. ಆದರೆ ಓದಿ ಹುರುಳಾಗಬೇಕು. ಪಾಂಡಿತ್ಯದ ಉಪಯೋಗವೇನು? ಅದೊಂದು ಕಸರತ್ತು. ಡೊಂಬರಾಟವಾಡಿ ಡೊಂಬರು ಹೊಟ್ಟೆ ತುಂಬಿಕೊಳ್ಳುತ್ತಾರೆ. ಅವರು ಹುಂಬರು. ಪಾಂಡಿತ್ಯವು ಬುದ್ಧಿಯ ಡೊಂಬರಾಟವಾಗಿದೆ. ಶಾಸ್ತ್ರೀಯ ಸಂಗೀತದಲ್ಲಿ ಪರಿಣತನಾದ ಗಾಯಕನ ಗಿರಡಿಗಳಂತೆ ಪಂಡಿತನ ಪಾಠಗಳಿವೆಯೆಂದು ಹೇಳಬಹುದು. ಇಂಥ ಪಾಂಡಿತ್ಯವು ಅಳಿದುಹೋದರೂ ಲೋಕಕ್ಕೆ ಅಂಥದೇನು ಹಾನಿಯಿಲ್ಲ. ಬುದ್ಧಿಯಿಂದ ಉಪಜೀವಿಸುವವರ ಉದರ ನಿರ್ವಾಹ ಪ್ರಶ್ನೆಯನ್ನು ಮಾತ್ರ ಪಾಂಡಿತ್ಯವು ಬಿಡಿಸುತ್ತದೆ. ಇದಕ್ಕೂ ಮುಂದೆ ಹೋದರೆ,—ಬುದ್ಧಿಯ ತೀಕ್ಷ್ಣತೆಯನ್ನು ಸಂರಕ್ಷಿಸಲು ಇಲ್ಲವೆ ಸಂವರ್ಧಿಸಲು ಅದರಿಂದ ಸಹಾಯವಾಗುತ್ತದೆ. ಬರಿ ಪಂಡಿತನೆಂದರೆ ಇದಕ್ಕಿಂತ ಹೆಚ್ಚು ಮುಂದೆ ಖಂಡಿತವಾಗಿ ಹೋಗಲಾರ.

ಆದರೆ ಜ್ಞಾನಯೋಗದ ರೀತಿಯು ತೀರ ಬೇರೆಯಾಗಿದೆ. "ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಿಂ ಕೇಳುತಂ" ಎಂದು ಒಬ್ಬ ಕವಿಯು ವರ್ಣಿಸಿದಂತೆ ಜ್ಞಾನವು ನಮ್ಮೆಡೆಗೆ ಅನೇಕ ಮುಖವಾಗಿ ಬರುತ್ತದೆ. ಅದೆಲ್ಲ ಏತಕ್ಕಾಗಿ ? ನಮ್ಮ ಆತ್ಮಲೀಲಾನುವೃದ್ಧಿಗೋಸ್ಕರವೇ ಸರಿ. ನಮ್ಮಲ್ಲಿಯ ಭಕ್ತಿ-ಪ್ರೀತಿಗಳನ್ನು ಕೊನರಿಸಲು ಜ್ಞಾನವು ನೀರೆರೆಯುತ್ತದೆ. 'ಸತ್' ಇಲ್ಲವೆ ಜಗತ್ತಿನ ಬಗ್ಗೆ ನಾವು ಹೆಚ್ಚು ಹೆಚ್ಚಾಗಿ ತಿಳಿದ ಹಾಗೆ ನಮ್ಮ ಭಾವನೆಗಳೂ ಉಕ್ಕಿ ಬರುತ್ತವೆ. 'ಚಿತ್' ಇಲ್ಲವೆ ಮನಸ್ಸಿನ ಸೂಕ್ಷ್ಮತೆಗಳನ್ನು ನಾವು ಒಳಹೊಕ್ಕು ನೋಡಿದ ಹಾಗೆಲ್ಲ ನಮ್ಮ ದೃಷ್ಟಿಯು ಪವಿತ್ರವಾಗುತ್ತದೆ. ನಮ್ಮ ಜೀವನದೃಷ್ಟಿಯನ್ನು ವಿಶಾಲಗೊಳಿಸಬೇಕಾದರೆ ಜ್ಞಾನವಿಲ್ಲದೆ ಗತಿಯಿಲ್ಲ.

ಸಂಚಾರದಿಂದ ಚರಾಚರದ ಅನುಭವವು ನಮಗೆ ಬಂದಂತೆ ವಿಚಾರ ಮಂಥನದಿಂದ ಯುಕ್ತಾಯುಕ್ತತೆಗಳ ಸತ್ಯವು ನಮಗೆ ಹೊಳೆಯುತ್ತದೆ. ಇದೂ ಸಹ ನಮ್ಮ ದಾರಿಬೆಳಕಾಗಬಹುದು. ನಮಗೆ ದೊರಕದ ದಾರಿಯನ್ನು ಇನ್ನೊಬ್ಬರು ತುಳಿಯುತ್ತಿರಬಹುದು. ಅವರೊಡನೆ ಬೆಳೆಸಿದ ಮಾತು-ಕಥೆ ಯಿಂದ ನಮ್ಮ ಪಯಣವು ಸುಗಮವಾಗಬಹುದು. ನಮಗಿಂತ ಮುಂದೆ ಹೋದವರ ಹೆಜ್ಜೆಯಲ್ಲಿ ನಾವು ಹೆಜ್ಜೆಯಿಟ್ಟು ನಡೆದಾಗ ವ್ಯರ್ಥ ಶ್ರಮವು ತಪ್ಪುತ್ತದೆ. ನಾವು ಸಹಿಸಬೇಕಾದ ಯಾತನೆಗಳಿಂದ ಒಮ್ಮೆ ನಮ್ಮ ಸುತ್ತಲು ಕಗ್ಗತ್ತಲೆಯು ಕವಿಯಬಹುದು. ಆದರೆ ಆ ನೋವುಗಳನ್ನೇ ಸಹಿಸಿ ಮುಂದು ವರಿದ ಮಹಾಪುರುಷರ ಚರಿತಗಳು ಈ ಕಗ್ಗತ್ತಲೆಯನ್ನು ಸರಿಪಡಿಸಬಹು ದಷ್ಟೆ ? ಜಗತ್ತಿನಲ್ಲಿ ಮುನ್ನುಗ್ಗಬೇಕು, ಅದರಲ್ಲಿ ಊಚ-ನೀಚವಾದುದ ನ್ನೆಲ್ಲ ಕಣ್ಣಾರೆ ಕಾಣಬೇಕು. ಆಗ ನಮ್ಮ ದಾರಿಯು ಇನ್ನಿಷ್ಟು ನಿಚ್ಚಳವಾಗಿ ಕಾಣುವದು. ಮನಸ್ಸಿಗೆ ಈ ಹದವನ್ನು ತಂದುಕೊಡುವದರಲ್ಲಿಯೇ ಸಾಹಿ ತ್ಯದ ಸಾಫಲ್ಯವಿದೆ.

ಗುರಿಯಿಲ್ಲದೆ ಪ್ರಪಂಚದಲ್ಲಿ ಈಸುಬೀಳುವದೂ ಶುದ್ಧ ಹುಂಬತನ ವಾಗಿದೆ. ಎಲ್ಲದರ ಅರಿವು ನಮಗಿರಬೇಕು ನಿಜ. ಆದರೆ ಹೊಳೆಯು ದೂಡಿ ದತ್ತ ನಾವು ಸಾಗಬಾರದು. ಸೆಳೆತಕ್ಕೆ ಅಂಕಿತಪಟ್ಟು ತೇಲಿದರೂ ಎದುರು ದಂಡೆಯ ಮೇಲೆ ಯಾವಾಗಲೂ ನಮ್ಮ ಕಣ್ಣಿರಬೇಕು. ನೀಚವಾದುದನ್ನು

ನಾವು ಕಣ್ಣಾರೆ ನೋಡಬಹುದು; ಆದರೆ ಕೈಮುಟ್ಟಬಾರದು. ಉತ್ತಮ ಪಾದುದರಲ್ಲಿ ನಾವು ಇನ್ನಿಷ್ಟು ಆಳವಾಗಿ ಧುಮುಕಬೇಕು. ಹೀಗೆ ಗುರಿಯೊಂದನ್ನಿಟ್ಟುಕೊಂಡರೂ ಸ್ವಚ್ಛಂದವಾಗಿ ಜಗತ್ತಿನ ಅನುಭವವನ್ನು ಪಡೆಯುವದರಲ್ಲಿಯೇ ಜ್ಞಾನದ ಮಹತಿಯಿದೆ.

ಜ್ಞಾನದ ಪರಮಾವಧಿ ಯಾವುದು? ಅದು ನಮಗೆ ಮಾಡಬಲ್ಲ ಮಹತ್ತಮ ಉಪಕಾರವಾವುದು? ಅದು ಕೊಡುವ ಕಣ್ಣೆಂತಹದು? ಕೀಟ್ಸ್ ಕವಿಯು ಇದನ್ನು 'ಹೈಪೀರಿಯನ್' ಎಂಬ ಕಾವ್ಯದಲ್ಲಿ ಬಹಳ ಚೆನ್ನಾಗಿ ವರ್ಣಿಸಿದ್ದಾನೆ:

> "ಇಂತು ಸತ್ಯದ ನೋವು ನೋವಿದೆಂದೆಂಬವಗೆ :
> ಸತ್ಯದಲಿ ನೋವನ್ನು ಕಾಣುವನೆ ತಿಳಿದವನು ?
> ಸತ್ಯ–ನಿಷ್ಠುರ ಸತ್ಯ–ಕ್ರೂರ ಸತ್ಯವ ಸಹಿಸು–
> ತದರ ಭಾರವ ತೀರ ಹಗುರಾಗಿ ತಾಳುವದೆ–
> ವಿಧಿ ತಂದ ನೂರು ಬಗೆಯಾಗುಹೋಗುಗಳಲ್ಲಿ
> ಕಂಡ ರುದ್ರತೆಗಳನು ಕಣ್ಣು ಪಿಳುಕಿಸದಂತೆ
> ಸ್ಥಿರ ಚಿತ್ತದಿಂದೀಕ್ಷಿಸುವದೆ,— ಇಂದ್ರನ ಹಿರಿಮೆ !"

ನಾವು ಮೋಹಿಸಿದ ವಸ್ತುಗಳೆಲ್ಲ ಮಾಯೆಯೆಂದು ತಿಳಿದರೂ ಅವುಗಳಲ್ಲಿ ಮಮತೆಯನ್ನು ತಾಳಿರುವದು ; ಜಗತ್ತಿದು ನಶ್ವರವೆಂದು ಗೊತ್ತಿದ್ದರೂ ಅದರ 'ಈಶ್ವರತೆ'ಯಲ್ಲಿ ಶ್ರದ್ಧೆಯಿರುವದು; ಮಣ್ಣಿನಲ್ಲಿ ಮಣ್ಣಾಗಿ ಹೋಗುವ ಕೋಟ್ಯಾವಧಿ ಕಣಗಳಲ್ಲಿ ನಾನೊಂದು ಕಣವೆಂದು ಮನಸ್ಸಿನಲ್ಲಿ ಕೊರೆದಿಟ್ಟಿದ್ದರೂ ಅಮರರಂತೆ ನಗುತ್ತ ಬಾಳುವದು ; ನಾವು ಪ್ರೀತಿಸುವವರೆಲ್ಲ ಮರಣದ ಗೊಂಬೆಗಳೆಂದು ಕ್ಷಣಕ್ಷಣಕ್ಕೆ ಹೃದಯವು ನುಡಿಯುತ್ತಿದ್ದರೂ ಅದರಿಂದ ಅಧೀರರಾಗದಿರುವದು ; ದುಃಖಗಳನ್ನೂ ಮರಣವನ್ನೂ ಅನ್ಯಾಯವನ್ನೂ ನೀಚತನವನ್ನೂ ಶಾಂತರಾಗಿ ಎದುರಿಸುವದು; ಇವೆಲ್ಲ ವೃತ್ತಿಗಳಲ್ಲಿ ಕಂಡುಬರುವ ದೃಷ್ಟಿಯೇ ಜ್ಞಾನಯೋಗವು ದಯಪಾಲಿಸುವ ದೃಷ್ಟಿಯೆನ್ನಬಹುದು.

ಇತಿಹಾಸವನ್ನೋದಿದಾಗ ಮಾನವ ಜಾತಿಯ ದುಃಖ ಪರಂಪರೆಯಲ್ಲಿ ವೈಯಕ್ತಿಕ ಕಷ್ಟ–ನಷ್ಟಗಳನ್ನು ನಾವು ಮರೆತುಬಿಡುತ್ತೇವೆ; ನಿಸರ್ಗದೊಡನೆ ಹೋರಾಡಿ ಮಾನವನು ಮನಗಾಣಿಸಿ ಕೊಟ್ಟ ಪೌರುಷವನ್ನು ಕಂಡು

ಹಿಗ್ಗುತ್ತೇವೆ. ಸಾಹಿತ್ಯವನ್ನೋದಿ ನಮ್ಮ ಭಾವನೆಗಳನ್ನೂ ಜೀವನಕ್ರಮವನ್ನೂ ನಾವು ಪವಿತ್ರತರವಾಗಿ, ಸೂಕ್ಷ್ಮತರವಾಗಿ ಪಲ್ಲಟಗೊಳಿಸುತ್ತೇವೆ; ನಮ್ಮ ಸುಖ-ದುಃಖಗಳಿಗೆ ಒಂದು ಹೊಸ ನಯವನ್ನು ತಂದುಕೊಡುತ್ತೇವೆ. ವಿಜ್ಞಾನ ಶಾಸ್ತ್ರದ ಪರಂಪರೆಯನ್ನು ಓದಿ ತಿಳಿದಾಗ ಸೃಷ್ಟಿಯ ವಿಶಾಲತೆಯೂ ಅದ್ಭುತವೂ ನಮ್ಮ ಕಣ್ಣೆದುರು ಬಂದು ನಿಲ್ಲುತ್ತವೆ; ಆಕರಾಳ-ವಿಕರಾಳವಾಗಿ ಕಾಣುವ ಈ ಸೃಷ್ಟಿಯು ಸಹ ಕೆಲವು ನಿಯಮಗಳಂತೆ ನಡೆಯುವುದು ನಮಗೆ ಮನದಟ್ಟಾಗುತ್ತದೆ. ಅದ್ಭುತವಾದ ಶಕ್ತಿಯೊಂದು ಮಣ್ಣಿನಲ್ಲಿ ಮೈಗೊಂಡು ಮರಬಳ್ಳಿಗಳಲ್ಲಿ ರೂಪ ತಾಳಿ ಪಶುಪಕ್ಷಿಗಳಾಗಿ ಸಂಚರಿಸಿ ಮಾನವನಾಗಿ ಯೋಚಿಸಿ ದೈವಿಕತೆಯನ್ನು ಸ್ಫುಟವಾಗಿಸಲು ಹಾಕಿದ ಹೊಂಚು ಕಂಡುಬರುತ್ತದೆ. ಚಿತ್ರಕಲೆಯೇ ಈ ಶಕ್ತಿಯ ಸೌಂದರ್ಯದ ಚಿತ್ರಸೃಷ್ಟಿ. ಮೂರ್ತಿಶಿಲ್ಪವೇ ಆ ಸೌಂದರ್ಯದ ಮೂರುತಿಯನ್ನು ನಮ್ಮ ಕಣ್ಣೆದುರಿಗೆ ನಿಲ್ಲಿಸುವ ಕಲೆ; ವಾಸ್ತುಶಿಲ್ಪವೇ ಅದರ 'ವಾಸ್ತವ' ಶಾಂತಿಯನ್ನು ಮಾಡುವ ವಿಧಾನ. ಸಂಗೀತವೇ ಅದರ ಬರವನ್ನು ಸ್ವಾಗತಿಸುವ ಮಂಗಳಸ್ವರ. ಧರ್ಮಶಾಸ್ತ್ರವೇ ಅದರ ರೀತಿ-ನೀತಿಗಳನ್ನು ತಿಳಿಸುವ ಸಾಧನೆ. ಮಾನವ ಜಾತಿಯು ಅನ್ನದ ಪ್ರಶ್ನೆಯು ಹೇಗೆ ಬಿಡಬೇಕೆಂಬುದನ್ನು ಅರ್ಥಶಾಸ್ತ್ರವು ತೋರಿಸಿದರೆ ಮಾನವರು ಒಟ್ಟುಗೂಡಿ ಹೇಗೆ ಬಾಳಬೇಕೆಂಬುದನ್ನು ಸಮಾಜಶಾಸ್ತ್ರವು ಸೂಚಿಸುತ್ತದೆ. ಜ್ಞಾನಾರ್ಜನೆಯ ಕ್ರಮವು ಹೇಗಿರಬೇಕೆಂಬುದನ್ನು ತತ್ವಶಾಸ್ತ್ರವು ಕಲಿಸಿಕೊಡುತ್ತದೆ. ಈ ಎಲ್ಲ ಕೂಟ-ಪ್ರಶ್ನೆಗಳ ಚಕ್ರವ್ಯೂಹವಾದ ಮಾನವೀಯ ಜೀವನದಲ್ಲಿ ಸಮ್ಯಕ್ ಜ್ಞಾನವನ್ನೂ ಸಮಾಲೋಕವನ್ನೂ ಹೇಗೆ ಒಡಮೂಡಿಸಬೇಕೆಂಬುದನ್ನು ಮಹಾಪುರುಷರ ಚರಿತ್ರಗಳು ಉದಾಹರಿಸಿ ತೋರಿಸುತ್ತವೆ. ಅಂತೂ ಭಕ್ತಿ-ಪ್ರೀತಿಗಳು ಮಾನವನನ್ನು ಪ್ರೇರಿಸಿದ ದೈವಿಕತೆಯ ಹಂಬಲಕ್ಕೆ ನೀರೆರೆದರೆ ಜ್ಞಾನವು ಬೆಳಕಾಗಿ ಅದನ್ನು ಕಾಯುತ್ತದೆ. ಅನುಭಾವವೇ ಅದರ ಟೊಂಗೆಗಳು ಮುಟ್ಟುವ ಆಕಾಶವೆನ್ನಬಹುದು.

ಜ್ಞಾನವಿಲ್ಲದೆ ಪರಮಾರ್ಥವು ಸಾಧಿಸಲಾರದೆಂದು ನಾನು ಹೇಳಲಾರೆ. ಕನ್ನಡ ನಾಡಿನ ಸಂತರನೇಕರು ಇತಿಹಾಸ-ವಿಜ್ಞಾನಗಳನ್ನು ತಿಳಿದಿರಲಿಲ್ಲ. ಆದರೆ ಅವರ ಅನುಭಾವವನ್ನು ಯಾರು ಅಲ್ಲಗಳೆಯಬಲ್ಲರು ? ಆದರೂ

ಜ್ಞಾನಿಯಿದ್ದ ಅನುಭಾವಿಗೆ ಜೀವನದ ರಹಸ್ಯದ ವಿವಿಧತೆಯು ಇನ್ನೂ ಹೆಚ್ಚು ಸ್ಪಷ್ಟವಾಗಿ ಗೋಚರವಾಗುವದೆಂದು ಹೇಳಬೇಕಾಗುತ್ತದೆ. ಬರಿ ಒಂದು ಗಿರಣಿಯನ್ನು ನೋಡಿದ ಶರೀಫಸಾಹೇಬರು

“ ಗಿರಣಿ ವಿಸ್ತಾರ ನೋಡಮ್ಮ !
ಶರಣು ಕೊಡಮ್ಮ !”

ಎಂದು ದೇಹವನ್ನು ಗಿರಣಿಗೆ ಹೋಲಿಸಿ ಹಾಡಿದರು. ಆದರೆ ಅನುಭಾವಿಗಳಾಗಿಯೂ ಶಾಸ್ತ್ರ-ವಿಜ್ಞಾನಗಳ ತಳಬುಡವನ್ನೆ ಅರಿತ ಶ್ರೀಅರವಿಂದರ ಜೀವನ-ದೃಷ್ಟಿಯು ಹೆಚ್ಚು ವ್ಯಾಪ್ತಿಯನ್ನು ಹೊಂದಿದೆಯೆಂದೂ ವಿಶಾಲತರವಾದ ಪರಿಧಾನವನ್ನು ಆಲಿಂಗಿಸಿದೆಯೆಂದೂ ನಾವು ಹೇಳಬಹುದಲ್ಲವೆ ?

ಭಕ್ತಿ ಪ್ರೀತಿಗಳ ಸಂಗೀತಕ್ಕೆ ಜ್ಞಾನದ ಹಿಮ್ಮೇಳವು ಬೇಕು. ಆದಕಾರಣ ಲಲಿತಾ ! ನೀನು ಇಂಗ್ಲಿಷು ಕಲಿಯಬೇಕೆಂದು ನಾನು ಹಟ ಹಿಡಿದೆ. ಆದರೇನು ? ಮನೆಕೂಡಿದ ಮೇಲೆ ಎ. ಬಿ ಸಿ. ಡಿ. ಯಿಂದ ಪ್ರಾರಂಭಿಸುವದು ಹೇಗೆ ಸಾಧ್ಯ ? ಇರಲಿ ಬಿಡು ! ಒಂದು ರೀತಿಯಿಂದ ಇದೇ ಒಳ್ಳೆಯದಾಯಿತು. ನೀನು ಇಂಗ್ಲಿಷು ಕಲಿತಿದ್ದರೆ ನಾನು ಇದನ್ನೆಲ್ಲ ಕನ್ನಡದಲ್ಲಿ ನಿನಗೆಲ್ಲಿ ಬರೆಯುತ್ತಿದ್ದೆ ! ಅಲ್ಲದೆ ಕನ್ನಡದಲ್ಲಿಯೂ ಸಾಕಷ್ಟು ಪುಸ್ತಕಗಳವೆ. ನಾನು ನಿನಗೊಂದು ‘ ಯಾದಿ ’ ಕಳಿಸಿರುವೆನಷ್ಟೆ ? ಅದರಲ್ಲಿಯ ಅನೇಕ ಪುಸ್ತಕಗಳನ್ನು ನಾನು ನಿನ್ನ ಕಡೆಗೇ ಬಿಟ್ಟು ಬಂದಿದ್ದೇನೆ. ಅವನ್ನೆಲ್ಲ ಓದಲು ಮರೆಯಬೇಡ.

ನಿನ್ನೊಲವಿನ,
**ವನಮಾಲಿ**

# ಓಲೆ (೮) ಕರ್ಮಕುಶಲತೆ

ಪ್ರಿಯ ಲಲಿತಾ,

ಭಕ್ತಿ-ಪ್ರೀತಿ-ಜ್ಞಾನಗಳು ಜೀವನಕ್ಕೆ ಸಾಕೆಂಬುದು ನಿಜ. ಆದರೆ ಈ ಎಲ್ಲ ಸಂಸ್ಕೃತಿಯು ಫಲದ್ರೂಪವಾಗಿ ಪರಿಣಮಿಸುವದೆಲ್ಲಿ? ಜೀವನದಲ್ಲಿ. ಬಾಳ ಕರವಾಳವು ಡೇಮೊಕ್ಲೀಸನ ಖಡ್ಗದಂತೆ ಸದಾ ತೂಗಾಡುತ್ತಿರುತ್ತದೆ. ಅದನ್ನು ಹಿಡಿದು ತಿರುವಿದವನೇ ಗೆದ್ದ. ಇದರ ಮುಂದೆ ರಾಮಚಾಪ,—ಯಾವ ಪಾಪ! ನಮ್ಮ ತಿಳುವಳಿಕೆಯನ್ನೆಲ್ಲ ಜೀವನದಲ್ಲಿ ಒಡಮೂಡಿಸು ವದೇ ನಮ್ಮ ಮುಖ್ಯ ಕಾರ್ಯವಾಗಿದೆ. ಕಲೋಪಾಸಕನು ತನ್ನ ಪ್ರತಿಭೆ ಯನ್ನೆಲ್ಲ ಕಲ್ಲಿನಲ್ಲರಳಿಸುತ್ತಾನೆ, ಸ್ವರದಲ್ಲಿ ತೇಲಿಸುತ್ತಾನೆ, ಶಬ್ದದಲ್ಲಿ ತುಂಬು ತ್ತಾನೆ, ಬಣ್ಣ ಬಣ್ಣಗಳಲ್ಲಿ ಕಣ್ಣುಬಿಡುವಂತೆ ತೂರುತ್ತಾನೆ. ಆದರೆ ಜೀವ ನವು ಇವೆಲ್ಲವುಗಳಿಗಿಂತ ಸೂಕ್ಷ್ಮತರವಾದ ವಾಹಕವಾಗಿದೆ. ಜೀವನಕಲೆಯು ಇವೆಲ್ಲವುಗಳಿಗಿಂತ ಘನತರವಾದ ಕಲೆಯಾಗಿದೆ. ಈ ಕಲೆಯ ಉಪಾಸಕ ರಾದ ನಾವು ನಮ್ಮ ಆದರ್ಶದ ಬೆಳಕನ್ನೆಲ್ಲ ಬಾಳುವೆಯಲ್ಲಿ ಬಿಂಬಿಸುವಂತೆ ಮಾಡಬೇಕು. ಹೀಗೆ ಮಾಡುವದೇ ಕರ್ಮಯೋಗವೆಂದು ಹೇಳಬಹುದು. ಇದೇ ಮಾನವನ ಆಂತರಿಕ ಯೋಗ್ಯತೆಯ ಒರೆಗಲ್ಲಾಗಿದೆ.

ದಿನಾಲು ನಾವು ಏನಾದರೂ ಮಾಡುತ್ತಿರುತ್ತೇವೆ. ಹುಟ್ಟಿನೊಡನೆ ಕ್ರಿಯೆಯೂ ಸಹಜ ಸಿದ್ಧವಾಗಿ ಬರುತ್ತದೆ. ಆದರೆ ನಾವು ಮಾಡುವದು ಯೋಗ್ಯವಿರಬೇಕು, ಸಂವರ್ಧಕವಿರಬೇಕಲ್ಲದೆ ಸಂಹಾರಕವಿರಬಾರ ದೆಂಬುದೇ ನಾವು ತಿಳಿಯಬೇಕಾದ ಮುಖ್ಯ ವಿಷಯವಾಗಿದೆ. ನಮ್ಮ ಪ್ರತಿ ಯೊಂದು ಮಾತಿನಲ್ಲಿ, ಕೃತಿಯಲ್ಲಿ ಸಮರಸದ ಬೀಜವಿರಬೇಕು. ಈ ಸಾಮ ರಸ್ಯಕ್ಕೆ ಅಧೀನವಾಗಿ ನಡೆದುಕೊಳ್ಳುವಂತೆ ನಮ್ಮ ದೈಹಿಕ, ಮಾನಸಿಕ ಹಾಗು ಬೌದ್ಧಿಕ ಶಕ್ತಿಗಳನ್ನು ಬೆಳೆಸುವದೇ ಕರ್ಮಯೋಗವಾಗಿದೆ.

ಮಾಡುವದನ್ನು ಚೊಕ್ಕಾಗಿ ಮಾಡಿದರೂ ಅದರಲ್ಲಿ ಆಸಕ್ತಿಯಿರ ಬಾರದು. ಬರಿ ತನ್ನಷ್ಟಕ್ಕೆ ತಾನಿರದೆ ತಾನೊಂದು ಸಮಾಜದ

ಅಂಗವಾಗಿರುವದನ್ನು ಮನಗಂಡಿರಬೇಕು. ಫಲದ ಆಸೆಯಿಲ್ಲದೆ ದುಡಿಯ ಬೇಕು. ವೈ ಸಣ್ಣಾಗಿಸಬೇಕು. ಸ್ವಾರ್ಥವನ್ನು ಮರೆಯುತ್ತ ಪರಾರ್ಥದ ಮುಖಾಂತರ ಪರಮಾರ್ಥವನ್ನು ಮುಟ್ಟಬೇಕು. ಇದೇ ಕರ್ಮಯೋಗದ ಗುಟ್ಟೆಂದು ಹೇಳಬಹುದು. ನಿರಪರಾಧಿಯಾದ ತನ್ನನ್ನು ಶಿಲುಬೆಗೇರಿಸಿದವ ರನ್ನು ಕುರಿತು ಕ್ರಿಸ್ತನು ದೇವರಲ್ಲಿ ಹೀಗೆ ಪ್ರಾರ್ಥಿಸಿದನಂತೆ: "ತಂದೆಯೇ! ಅವರನ್ನು ಕ್ಷಮಿಸು. ತಾವೇನು ಮಾಡುತ್ತಿರುವೆವೆಂಬುದರ ಅರಿವೇ ಅವರಿಗಿಲ್ಲ."

ಆದರೆ ಕರ್ಮಯೋಗದ ಈ ಕಾಠಿನ್ಯವು ಎಲ್ಲರಿಗೂ ಸಾಧಿಸಲಾರದು. ಅದಕ್ಕೆ ಬೇಕು—ಜನ್ಮಜನ್ಮಾಂತರದ ಪುಣ್ಯ! ಇದು ದೂರವಿದ್ದರೂ ನಮ್ಮ ದಿನಚರ್ಯೆಯಲ್ಲಿ ಒಂದು ಬಗೆಯ ಕರ್ಮಕೌಶಲ್ಯವು ಅವಶ್ಯವಿದೆ. ನಮ್ಮ ವಿಚಾರಸಮುದ್ರವನ್ನೇ ನಾವು ಮಥಿಸಿ ಅಲ್ಲಿಯ ಹವಳ ಮುತ್ತುಗಳನ್ನು ಕಂಡುಹಿಡಿಯಬೇಡವೆ? ಪ್ರತಿಯೊಂದು ಮನೆಯಲ್ಲಿ ತಪ್ಪು ತಿಳುವಳಿಕೆ ಬೇರು ಬಿಟ್ಟು ಅದೆಷ್ಟು ಜಗಳಗಳು ಬಲಿಯುವದಿಲ್ಲ? ಹಿರಿಯರು-ಕಿರಿಯರು ಸರಿಸಮಾನರೊಡನೆ ಹೇಗೆ ನಡೆದುಕೊಳ್ಳಬೇಕೆಂಬುದು ಗೊತ್ತಾಗದೆ ಗತಿ ಗೆಟ್ಟು ಹೋದ ಅನೇಕ ಸಂಸಾರಗಳನ್ನು ನಾವು ಅಲ್ಲಲ್ಲಿ ಕಣ್ಣಾರೆ ಕಾಣ ಬಹುದು. ಇಲ್ಲವೆ ಸಾರ್ವಜನಿಕ ಸಂಸ್ಥೆಗಳ ವಿಷಯವನ್ನೇ ಪರೀಕ್ಷಿಸೋಣ. ಇಂಥ ಸಂಸ್ಥೆಗಳೆಂದರೆ ಈಗ ಜಾತಿಮತಗಳ ರಣರಂಗಗಳೆಂದು ಹೇಳಬೇಕಾ ಗುತ್ತದೆ. ಜಾತಿಮತಗಳನ್ನು ಮೀರಿ ನಿಂತ ಸಂಸ್ಥೆಗಳಲ್ಲಿ ಅಹಂಭಾವಗಳ ತುಮುಲ ಯುದ್ಧವು ಕಂಡುಬರುತ್ತದೆ. ಒಮ್ಮೊಮ್ಮೆ ಅಹಮಹಮಿಕೆಯ ಮೂಲಕ ಹೊಳೆದ ಸತ್ಯವು ಸಹ ಹೊಳೆಯಲ್ಲಿ ತೊಳೆದ ಹುಣಸಿಯಾಗು ವದುಂಟು. ಹೀಗೆ ಸಂಸ್ಥೆಯೆಂದರೆ ನರಕವಾಗಿ ಸಂಸ್ಥೆಯ ತಾರಕರೆಲ್ಲ ನಾರಕ ರಾಗುತ್ತಾರೆ. ಇದಕ್ಕಿಂತ ಹೀನವಾದ ಸ್ಥಿತಿ ದೇಶದಲ್ಲಿ ಇನ್ನಾವುದು? ಅಭಿ ಪ್ರಾಯ ಭೇದಗಳನ್ನು ಬದಿಗೆ ಸರಿಸಿ ಒಮ್ಮನಸ್ಸಿನಿಂದ ಕಾರ್ಯೋನ್ಮುಖ ರಾಗಲು ಒಂದು ಹೆಚ್ಚಿನ ಸಂಸ್ಕೃತಿಯು ಬೇಕಾಗುತ್ತದೆ. ಅದನ್ನು ನಾವಿಂದು ಕಳೆದುಕೊಂಡಿದ್ದೇವೆ.

ಆಳು-ಹೋಳುಗಳನ್ನು ನಡೆಯಿಸಿಕೊಳ್ಳುವ ರೀತಿಯನ್ನು ನೋಡು! ಇಂಥವರೊಡನೆ ಪ್ರೇಮದಿಂದ ನಡೆದುಕೊಳ್ಳಬೇಕೆಂಬುದನ್ನೇ ಅನೇಕರು ಮರೆಯುತ್ತಾರೆ. ಪಗಾರ ಕೊಟ್ಟಮೇಲೆ ಬೆಣ್ಣೆ ಹಚ್ಚುವ ಕೆಲಸವೇಕೆಂದು

ಇವರ ಪ್ರಶ್ನೆ ! ಆದರೆ ಮಾನವನು ಯಾವ ಉದ್ಯೋಗವನ್ನೇ ಅನುಸರಿಸಲಿ, ಅವನಿಗೊಂದು ಹೃದಯವಿರುವದು ಸುಳ್ಳೆ ? ಒಳ್ಳೆಯ ಮಾತಿಗೆಲ್ಲಿಂದ ಬಡತನ ಬಂತು ? ಒಳ್ಳೊಳ್ಳೆಯನ್ನು ಕೊಳ್ಳಲು ಬೇಕಾದ ದುಡ್ಡು ಒಳ್ಳೆಯ ಮಾತಿನ ಹಸಿವನ್ನು ಹೇಗೆ ಕಳೆದೀತು ?

ಮಾತಾಡುವದು ಸುಲಭ. ಮಾತಿನಂತೆ ಕೃತಿಯಿದ್ದವರು ಮಾತ್ರ ಎಲ್ಲ ಕಡೆಗೂ ಸಿಕ್ಕುವದಿಲ್ಲ. ಅಂತೇ ಕರ್ಮಕೌಶಲ್ಯವು ಕಷ್ಟಸಾಧ್ಯವೆಂದು ಹೇಳಬೇಕಾಗುತ್ತದೆ. ನಮ್ಮ ನಿತ್ಯದ ಜೀವನವನ್ನೇ ಅಳೆಯೋಣ. ಅಲ್ಲದ ಸಲ್ಲದ ಮಾತುಗಳೆಂದು ನಮಗೆ ಗೊತ್ತಿದ್ದರೂ ಇಂಥ ಎಷ್ಟು ಮಾತುಗಳನ್ನು ನಾವು ಆಡುತ್ತೇವೆ ! ಸಿಟ್ಟಿಗೇಳಬಾರದೆಂದರೂ ಅದರ ಕೈಯಲ್ಲಿ ಎಷ್ಟು ಸಲ ನಾವು ನಮ್ಮ ಬುದ್ಧಿ ಕೊಡುತ್ತೇವೆ! ಹೊಸ ವರ್ಷದ ಹುರುಪಿನಲ್ಲಿ ಹೊತ್ತ ನೋಂಪಿಗಳೆಷ್ಟು ಮೂಲೆಗುಂಪಾಗಿ ಬೀಳುತ್ತವೆ ! ಇದೆಲ್ಲದರ ಅರ್ಥವೇನು ? ಕರ್ಮಕೌಶಲ್ಯದ ಅಡಿಗಲ್ಲಾದ ಕ್ರತುಶಕ್ತಿಯ ದುರ್ಬಲತೆಯೇ ಈ ಸೋಲಿಗೆಲ್ಲ ಕಾರಣವಾಗುತ್ತದೆ.

ರತ್ನಾಕರವರ್ಣಿಯು ಚಿತ್ರಿಸಿದ ಭರತೇಶನು ಅಸಾಧಾರಣನಾದ ಕರ್ಮಯೋಗಿ. ತನ್ನ ತಾಯಿಯೊಡನೆ ಆತನೆಷ್ಟು ಆದರದಿಂದ ನಡೆದುಕೊಳ್ಳುತ್ತಾನೆ ! ತನ್ನ ಪತ್ನಿಯರಲ್ಲಿ ಅದೆಂತಹ ಪ್ರೀತಿಯನ್ನು ತೋರಿಸುತ್ತಾನೆ ! ತನ್ನ ಸೇವಕರನ್ನು ಅದೆಷ್ಟು ವಾತ್ಸಲ್ಯದಿಂದ ನಡೆಯಿಸಿಕೊಳ್ಳುತ್ತಾನೆ ! ತನ್ನ ಆಸ್ಥಾನ ಕವಿಗಳನ್ನೂ ಗಾಯಕರನ್ನೂ ಅದೆಷ್ಟು ಪರಿ ಮನ್ನಿಸುತ್ತಾನೆ ! ಹೀಗಿದ್ದರೂ ಭರತೇಶನು ಆತ್ಮವಿನೋದಿ. ಕ್ಷಣಾರ್ಧದಲ್ಲಿ ತನ್ನೊಳಗೆ ತಾನು ಮುಳುಗಿ ಆತ ಜಗತ್ತನ್ನೇ ಮರೆತುಬಿಡಲಿಲ್ಲ. ಪ್ರತಿಯೊಬ್ಬ ಸಾಧಕನಲ್ಲಿ ಈ ಎರಡು ಬಗೆಯ ಪ್ರಭುತ್ವ ಬೇಕು. ಅಂದರೇನೆ ಜನ್ಮವು ಸಾರ್ಥಕವಾದೀತು. ಭರತೇಶನ ಕರ್ಮಯೋಗ, ಅಲ್ಲಮಪ್ರಭುವಿನ ನಿಷ್ಠುರ ಜ್ಞಾನವಂತಿಕೆ, ಪುರಂದರದಾಸರ ನಿಸ್ಸೀಮ ಭಕ್ತಿಸಾಧನೆ,—ಇಂಥ ರತ್ನಪಾಠಗಳನ್ನು ಹೇಳಿಕೊಟ್ಟ ಕನ್ನಡ ನಾಡು ಉಚ್ಚ ಸಂಸ್ಕೃತಿಯ ಆಗರವಾಗಿತ್ತೆಂದು ನಾವು ಹೇಳಲಾರೆವೆ ?

ಈ ರತ್ನಪಾಠಗಳನ್ನೆಲ್ಲ ಕಳೆದುಕೊಂಡ ಕನ್ನಡ ನಾಡು ಇಂದು ಕಾಡಾಗಿದೆ. ಜೀವನವೆಂದರೆ ಪ್ರತಿಯೊಬ್ಬ ಮಾನವನ ಕೈಯಲ್ಲಿ ದೇವರು ಕೊಟ್ಟ

ಮಾಣಿಕವೆಂದು ತಿಳಿಯಬಹುದು. ನಾವು ರತ್ನರಸಿಕರಾಗಿ ಮಾಣಿಕದ ಚೆಲುವು ಹಿರಿದಾಗುವಂತೆ ಅದನ್ನು ರೂಪಿಸಬೇಕು, ತಿದ್ದಬೇಕು. ಹೀಗೆ ಮಾಡಲು ಬೇಕಾಗುವ ಸಾಧನವೇ ಕರ್ಮಯೋಗ. ಒಂದು ವೇಳೆ ಪರಿಪೂರ್ಣತೆಯನ್ನು ಮುಟ್ಟುವದು ಮಾನವನಿಗೆ ಅಸಾಧ್ಯವಾದರೂ ಅದರ ಹಾದಿಯಲ್ಲಾದರೂ ಅವನು ನಡಿಯಬಹುದಲ್ಲ! ಇದಾದರೂ ಸಣ್ಣ ಮಾತಲ್ಲ.

ಮೂಡುತ್ತಿರುವ ವಿಚಾರವನ್ನು, ಆಡುತ್ತಿರುವ ಮಾತನ್ನು, ಮಾಡುತ್ತಿರುವ ಕೃತಿಯನ್ನು,—ಇವೆಲ್ಲವನ್ನೂ ನಾವು ತೂಗಿ ನೋಡಿ ಜಗತ್ತಿನಲ್ಲಿ ಸುಳಿಯಲು ಬಿಡಹತ್ತಿದೆವೆಂದರೆ ಕುಶಲ ಜೀವನಕ್ಕೆ ಪ್ರಾರಂಭವಾಗುತ್ತದೆ. ಈ ಪ್ರಾರಂಭಕ್ಕೆ ಕೊನೆಯೇ ಇಲ್ಲ. “ ನಡೆದಷ್ಟು ದಾರಿಯಿದೆ,—ಪಡೆದಷ್ಟು ಭಾಗ್ಯವಿದೆ” ಎಂಬುದೇ ಜಗತ್ತು ನಮಗೆ ಕೊಡುವ ಸಂದೇಶವಾಗಿದೆ.

ಶ್ರದ್ಧೆಯಿದ್ದ ಕೆಲಸವನ್ನು ಮಾತ್ರ ನಾವು ಕೈಕೊಳ್ಳಬೇಕು. ಮನಸ್ಸಿಲ್ಲದ ಮಾಳ್ಕೆಯು ಅಯಶಸ್ವಿಯಾಗುವದಲ್ಲದೆ ಮಾಡುವವನ್ನು ಅಧೋಗತಿಗೊಯ್ದು ಚೆಲ್ಲುವದು.

ಈ ಎಲ್ಲ ಉಪನ್ಯಾಸಗಳನ್ನು ಕೇಳುವದು ನಿನ್ನ ಕರ್ಮ—ಎನ್ನದಿರು! ಇದರಲ್ಲಿ ನಿನಗೆ ಶ್ರದ್ಧೆಯಿರದಿದ್ದರೆ ನಾನೆಲ್ಲಿ ಈ ವಿಷಯಗಳನ್ನೆಲ್ಲ ಕುರಿತು ನಿನಗೆ ಬರೆಯುತ್ತಿದ್ದೆ! ನಮ್ಮ ನಿತ್ಯದ ಬಾಳೊಂದು ಕವನವಾಗಬೇಕು. ಅದು ನಮ್ಮ ಸ್ಫೂರ್ತಿಯಿಲ್ಲದೆ ನೋಡಿದವರ ಸ್ಫೂರ್ತಿಯೂ ಆಗಬೇಕು. ಇದೇ ನನ್ನನ್ನು ಪ್ರೇರಿಸಿದ ಭಾವನೆಯಾಗಿದೆ. ಕಾವ್ಯವನ್ನೋದುವದು ಒಂದು ರೀತಿ. ಅದಕ್ಕೂ ಒಳ್ಳೆಯದೆಂದರೆ,—ಕಾವ್ಯವನ್ನು ಬರೆಯುವದು. ಆದರೆ ಕಾವ್ಯಮಯ ಜೀವಿತವನ್ನು ಇರುವದೇ ಶ್ರೇಷ್ಠತಮವಾದುದೆಂದು ರೂಪರ್ಟ್ ಬ್ರೂಕ್ ಎಂಬ ಕವಿ ಹೇಳಿದ್ದಾನೆ. ಇದನ್ನು ಸಾಧಿಸಲು ಪ್ರಯತ್ನಿಸೋಣ!

ನಿನ್ನೊಲವಿನ,

**ವನಮಾಲಿ**

# (೯) ದಾಂಪತ್ಯ

ರವಿವಾರ ಮುಂಜಾನೆ ಹಾಯಾಗಿ ಕುಳಿತಿದ್ದೆ. ಅಂದು ರವಿವಾರ; ಅಂತೇ ಭಾವನಾಸ್ವಾತಂತ್ರ್ಯದ ದಿನ. ಇಷ್ಟು ಹೊತ್ತಿಗೆ ಹೀಗೆ ಮಾಡ ಬೇಕೆಂಬ ನಿಯಮವಿಲ್ಲ. ಇಂಥ ಕೆಲವು ಕಾಗದ-ಪತ್ರಗಳನ್ನೇ ತಲೆಯಲ್ಲಿ ತುಂಬಿಕೊಂಡು ಅವುಗಳ ಉತ್ತರವನ್ನು ತಯಾರಿಸಬೇಕೆಂಬ ಕಟ್ಟಳೆಯಿಲ್ಲ. ಯಂತ್ರ-ತಂತ್ರಗಳ ದಿನವಲ್ಲ ಅದು. ಮಂತ್ರದ ದಿನ. ಫೈಲುಗಳ 'ಥೀಗಿ' ನ ಕೆಳಗೆ ಸಿಕ್ಕುಬಿದ್ದ ಚಿತ್ತವೃತ್ತಿ ಅಂದು ಮತ್ತೆ ಚೇತರಿಸಿಕೊಳ್ಳುವದು, ಯಂತ್ರಾರೂಢವಾದ ಮನಸ್ಸು ಅಂದು ಸಿದ್ಧಾರೂಢವಾಗುವದು. ಹಾಸಿಗೆಯ ಮೇಲೆ ಎದ್ದು ಕುಳಿತು—ಬೇಕಾದರೆ ಹಾಗೆಯೇ ತಾಸುಗಟ್ಟಲೆ ಧೇನಿಸುತ್ತ ಕುಳಿತುಕೊಳ್ಳಬಹುದು. ಒಂದು ಗುಟುಕಿಗೇ ದಿನಾಲು ಚಹದ ಕಪ್ಪನ್ನು ತೆರವು ಮಾಡುವದರ ಬದಲು ಅಂದು ಚಹದ ಹನಿಹನಿಯನ್ನು ಸವಿ ನೋಡುತ್ತ ಊಟದ ಟೇಬಲ್ಲಿಗೆ ಕುಳಿತುಬಿಡಬಹುದು. ಆಕಾಶದ ಉದ್ಯಾನ ದಲ್ಲಿ ನಸುಕು ಮೊಗ್ಗಿಬಿಟ್ಟು ಸೂರ್ಯನಾಗಿ ಅರಳುವತನಕ ಅದರ ಎಲ್ಲ ಲೀಲೆ ಯನ್ನು ನಿದಾನವಾಗಿ ನೋಡಬಹುದು. ಮನೆಮುಂದಿನ ತೋಟದಲ್ಲಿ ತಿರು ಗಾಡುತ್ತ ಮನವನ್ನು ತುಂಬಿಕೊಳ್ಳಬಹುದು. ಎಷ್ಟೆಂದರೂ ರವಿವಾರ ರವಿಯ ವಾರವಲ್ಲ; ಕವಿಯ ವಾರ. ವಾರದಲ್ಲಿಯ ಆರು ದಿನಗಳು ' ಮನೆ ' ತುಂಬಿಸಿ ಕೊಳ್ಳುವ ದಿನಗಳು. ಆದರೆ ರವಿವಾರವು 'ಮನ' ತುಂಬಿಸಿಕೊಳ್ಳುವ ದಿನ....

ರವಿವಾರ ನಾನು 'ಜಿಲೆಟ್' ಹಿಡಿಯಬೇಕೋ ಬೇಡವೋ ಎಂಬುದನ್ನೇ ಒಂದು ಕಾಲು ಗಂಟೆ ವಿಚಾರ ಮಾಡುತ್ತೇನೆ. ಅಂದು ಮೋರೆಗೂದಲಿಗೂ ಏಕೆ ಸ್ವಾತಂತ್ರ್ಯವನ್ನು ಕೊಡಬಾರದು ? ಆದರೆ ವಿಚಾರವೆಲ್ಲ ಕೊನೆಗೆ ದಿನದ ಕರ್ಮದಲ್ಲಿಯೇ ಮುಗಿಯುತ್ತದೆ. ಯಾವುದೋ ಸಭೆಯಿರುತ್ತದೆ, ಯಾರೋ ಚಹಕ್ಕೆ ಕರೆದಿರುತ್ತಾರೆ, ಯಾರನ್ನೋ ನಾನು ಚಹಕ್ಕೆ ಕರೆದಿರು ತ್ತೇನೆ. ಮಂದಿಯ ಎದುರು ಕಪಾಳಕ್ಕೆ ಕೈ ಹೋಗುವದು ಬೇಡವೆಂದು

'ಜಿಲೆಟ್'ದೇವರು ತಲೆಬಾಗಬೇಕಾಗುತ್ತದೆ. ಇಲ್ಲಿ ಮಾತ್ರ ದೈನಂದಿನದ ಯಾಂತ್ರಿಕತೆ ರವಿವಾರವನ್ನು ನಸುವೆ ಅಂಟಿಕೊಂಡಿದೆ.

ಆದರೂ ಒಂದು ಸೂಕ್ಷ್ಮ ಭೇದವಿದೆ. ದಿನಾಲು ಹತ್ತು ನಿಮಿಷಗಳಲ್ಲಿ ಮುಗಿಯುವ ಆಯುಷ್ಕರ್ಮ ರವಿವಾರ ನಿದಾನವಾಗಿ ನಡೆದಿರುತ್ತದೆ. ರವಿವಾರ ಕೆಲವೊಂದು ಸ್ನೇಹಿತರು ನನ್ನೆಡೆಗೆ ಒರದೆ ಇರುವದಿಲ್ಲ. ಅವರು ಬಂದು ನಗುತ್ತಾರೆ, ಕೆಲಿಯುತ್ತಾರೆ; ನಾನೂ ನಗುತ್ತೇನೆ. ಕೈಯಲ್ಲಿಯ ಜಿಲೆಟ್ ಕೈಯಲ್ಲಿಯೇ ಇರುತ್ತದೆ ಒಬ್ಬ ಸ್ನೇಹಿತನು ಹೋಗಿ ಇನ್ನೊಬ್ಬನು ಬರುತ್ತಾನೆ. ಆದರೆ ಒಂದು ಕಪಾಳದಿಂದ 'ಜಿಲೆಟ್' ಇನ್ನೊಂದು ಕಪಾಳಕ್ಕೆ ಹೋಗಿರುವದಿಲ್ಲ...........

ಅಂದು ಮುಂಜಾನೆ ಜಿಲೆಟ್ ಹಿಡಿದು ಕುಳಿತುಕೊಂಡಿದ್ದೆ. ರತಿಲಾಲನು ಬಂದ. ರತಿಲಾಲನು ಬಂದಾಗ ರವೀಂದ್ರ–ಮಹಾತ್ಮಾಜಿ-ಶ್ರೀಅರವಿಂದರ ಹೊರೆತು ಮಾತಿಲ್ಲ. ಈ ತ್ರಿಮೂರ್ತಿಗಳಲ್ಲಿ ಅನ್ಯ ಶ್ರದ್ಧೆ ಅವನಿಗೆ. 'ಅವರ' ಸ್ಫೂರ್ತಿಯಿಂದ ತನ್ನಲ್ಲಿ ಅರಳಿದ ಕನಸುಗಳನ್ನು ರತಿಲಾಲನು ಬಣ್ಣಿಸುತ್ತಾನೆ. ಅದನ್ನು ಕೇಳುವದೇ ಒಂದು ಹಬ್ಬ. ಉತ್ಸವಮೂರ್ತಿಯಂತೆ ಸದಾ ರತಿಲಾಲನು ಕುಲುಕುಲು ನಗುತ್ತಿರುತ್ತಾನೆ. ಅವನನ್ನು ನೋಡುವದೇ ಕಣ್ಣಿಗೊಂದು ಪಾರಣೆ.

ಆದರೆ ಇಂದು ಮುಂಜಾನೆ ಬಂದಾಗ ಅದೇಕೋ ರತಿಲಾಲನ ಮೊಗವು ಕಂದಿತ್ತು. ಪ್ರತಿ ರವಿವಾರದ ಉಲ್ಲಾಸ ಅವನ ಮೊಗದಲ್ಲಿ ಸುಳಿದಿರಲಿಲ್ಲ. ಬಂದು ಕುಳಿತವ ಹಾಗೆಯೇ ಧೇನಿಸುತ್ತ ಕುಳಿತುಬಿಟ್ಟ, ಮಾತನಾಡಲಿಲ್ಲ. ಕೆಲವು ನಿಮಿಷಗಳಾದ ಮೇಲೆ ನಾನೇ ಜಿಲೆಟ್‌ದ ಕೆಲಸ ನಿಲ್ಲಿಸಿ ಮೋರೆ ಎತ್ತಿ ಕೇಳಿದೆ: "ಏಕೆ, ರತಿಲಾಲ! ಇವತ್ತು ಸುಂದಾಗಿದ್ದೀರಿ? ಮನೆಯಲ್ಲಿ ಎಲ್ಲ ಸೌಖ್ಯವೆ? ನಿರುಪಮಾದೇವಿ ಕ್ಷೇಮವಾಗಿದ್ದಾರಷ್ಟೆ?"

ರತಿಲಾಲನು ಮೆಲ್ಲನೆ ತನ್ನ ಭಾವ ಸಮಾಧಿಯಿಂದ ಎಚ್ಚರಗೊಂಡ. ಆ ಮೇಲೆ ಗಂಭೀರನಾಗಿ ನನ್ನ ಟೇಬಲ್ಲಿನ ಮೇಲಿನ ಒಂದು ಪುಸ್ತಕವನ್ನು ಕೈಯಲ್ಲಿ ತೆಗೆದುಕೊಂಡು, "ಇದ್ದಾರೆ. ಹೆಣ್ಣಿನ ಮನಸ್ಸಿನ ರೀತಿಯೇ ಒಂದು ಒಡೆಯಲಾರದ ಒಗಟ" ಎಂದು ಪ್ರಯಾಸದಿಂದ ನುಡಿದ.

ಈ ಮಾತು ಅನಿರೀಕ್ಷಿತವಾಗಿತ್ತು. ನನ್ನ ಜಿಲೆಟ್ ನಿಧಾನವಾಗಿ ತನ್ನ ಕೆಲಸವನ್ನು ಸಾಗಿಸಿತ್ತು. ನಾನು ಒಮ್ಮೆಲೆ ಮೋರೆಯನ್ನು ಮೇಲೆತ್ತಿ ನೋಡಿದೆ. ರವಿವಾರದ ನಿದಾನತೆಯು ಮೋರೆಯನ್ನು ಮೀರಿದ್ದಕ್ಕಾಗಿ ಜಿಲೆಟ್ ನನ್ನ ಕಪೋಲವನ್ನು ಒಂದೆಡೆಗೆ ರಕ್ತಮಯವಾಗಿಸದೆ ಬಿಡಲಿಲ್ಲ.

"ಅದೇಕೆ, ರತಿಲಾಲ್ ! ಹೆಣ್ಣೇಕೆ ಅಂಥ ಒಗಟ ?" ಎಂದು ನಾನು ಆತುರನಾಗಿ ಪ್ರಶ್ನಿಸಿದೆ. ರತಿಲಾಲನ ಮನಸ್ಸಿನಂತಹ ಪ್ರಶಾಂತ ಸರೋವರ ವನ್ನು ಕದಡುವ ಗಡೆಯಾವುದು ?

ಇದು ರತಿಲಾಲನು ತಪ್ಪಿತಪ್ಪಿ ನುಡಿದ ಮಾತಾಗಿರಲಿಲ್ಲ. ಅವನ ಹೃದಯದ ಆಳದಿಂದ ಆ ಮಾತು ಹೊರಬಿದ್ದಿತ್ತು. ಅವನು ಮತ್ತೆ ಸಾವ ಕಾಶವಾಗಿ ಹೇಳಿದ: "ಶ್ರೀ ಅರವಿಂದರು ಚಿತ್‌ಶಕ್ತಿಯಾದ ಆದಿಮಾತೆಯು ಚತುರ್ಮುಖಗಳನ್ನು ತಮ್ಮ ಪುಟ್ಟ ಹೊತ್ತಿಗೆಯಲ್ಲಿ ಬಣ್ಣಿಸಿದ್ದಾರಲ್ಲ! ಸತಿಗೂ ಆ ಚತುರ್ಮುಖಗಳಿರುತ್ತವೆ. ಮಹಾಸರಸ್ವತಿ. ಮಹಾಲಕ್ಷ್ಮಿ, ಮಹಾಕಾಳಿ, ಮಾಹೇಶ್ವರಿ,—ಈ ನಾಲ್ವರಿಯನ್ನೂ ಸತಿಯಲ್ಲಿ ಕಾಣಬಹುದು. ಆದರೆ ಮಹಾಕಾಳಿಯಾಗಿ ಅವಳಿತ್ತ ದರ್ಶನವನ್ನು ಅರಗಿಸಿಕೊಳ್ಳುವದು ಕಷ್ಟ."

ಆಗ ನನ್ನ ಕಣ್ಣು ನಿಚ್ಚಳವಾದವು. ಜಿಲೆಟ ಮತ್ತೆ ತನ್ನ ಕೆಲಸವನ್ನು ಮುಂದೆ ಸಾಗಿಸಿತು. 'ನಿಜ' ಎಂದು ಮತ್ತೆ ಕನ್ನಡಿಯಲ್ಲಿ ನಾನು ನೋಡ ಹತ್ತಿದೆ. ನಿರುಪಮಾ ದೇವಿಯವರಂತಹ ಸೌಜನ್ಯ—ವಿನಯಪೂರ್ಣ ಮೂರ್ತಿಯನ್ನು ನಾನು ಇನ್ನೊಂದೆಡೆಗೆ ನೋಡಿಲ್ಲ. ಆದರೆ ಯಾರಿಗೆ ಗೊತ್ತು? ಇರಬಹುದು. ಮಹಾಕಾಳಿಯ ಅವತಾರವನ್ನು ಎತ್ತುವದರಲ್ಲಿಯು ನಿರು ಪಮಾ ದೇವಿಯವರು ನಿರುಪಮವಾಗಿರಬಹುದು...........

ಇಷ್ಟು ಮಾತನಾಡಿದ ಮೇಲೆ ರತಿಲಾಲನಿಗೂ ಸಮಾಧಾನವಾಗಿತ್ತು. ನನ್ನ ಹಾಗು ಅವನ ಸಂಭಾಷಣೆ ಸಾಂಕೇತಿಕವಾದುದು. ಒಂದು ಸಿದ್ಧಾಂತ ದಲ್ಲಿ ತನಗೆ ಹೇಳಲಿರುವ ಸಿಹಿ-ಕಹಿಗಳನ್ನೆಲ್ಲ ತುಂಬಿಬಿಟ್ಟು ಮತ್ತೆ ಸುಮ್ಮ ನಾಗುವದು ರತಿಲಾಲನ ಮನೋವೃತ್ತಿ, ಸಿದ್ಧಾಂತಗಳ ಚರ್ಚೆಯನ್ನು ಅವನು ತಾಸುಗಟ್ಟಲೆ ನಡೆಯಿಸಬಲ್ಲ. ಆದರೆ ತನ್ನ ವೈಯಕ್ತಿಕ ವ್ಯಾವಹಾರಿಕ ಜೀವ ನದ ಬಗ್ಗೆ ಹೇಳಬೇಕಾದಾಗ ಬಹಳವಾದರೆ ಒಂದು ಪ್ರಮೇಯವನ್ನು ಪ್ರಸ್ಥಾ ಪಿಸಿ ಅವನು ಸುಮ್ಮನಾಗಿಬಿಡುವ.......

ನನ್ನ 'ಜಿಲೆಟ್' ಹೆಚ್ಚು ದಕ್ಷತೆಯಿಂದ ಕಾರ್ಯಪ್ರವೃತ್ತವಾಯಿತು. ಮೋರೆ ತೊಳೆದುಕೊಂಡು ನಾವಿಬ್ಬರೂ ಚಹ ಕುಡಿದೆವು. ಬಳಿಕ ನಾನು ರತಿಲಾಲನನ್ನು ತೋಟದೊಳಗೆ ಕರೆದುಕೊಂಡು ಹೋದೆ ಅಲ್ಲಿಯ ಬಗೆಬಗೆಯ ಹೂವನ್ನು ನೋಡಿದೆವು. ಸಸ್ಯ-ಸೃಷ್ಟಿಯಲ್ಲಿ ಹೆಣ್ಣು-ಗಂಡಿನ ಪ್ರಶ್ನೆ ಜಟಿಲವಾಗಿರುವದಿಲ್ಲ ಇಲ್ಲಿ ಎಲ್ಲ ದೇವ-ನಿಯಮಿತ. ಕೆಲವೊಂದು ಸಸ್ಯ ಪ್ರಕಾರಗಳಲ್ಲಿ ಹೆಣ್ಣು-ಗಂಡು ಒಂದನ್ನೊಂದು ನೋಡಲಾರದು ಸಹ! ದೇವದೂತನಾದ ಮಾರುತನು ಗಂಡಿನಿಂದ ಕುಂಕುಮವನ್ನೊಯ್ದು ಹೆಣ್ಣಿನ ಹಣೆಗೆ ಹಚ್ಚುತ್ತಾನೆ. ಹೀಗೆ ಸಸ್ಯಸಂಸಾರ ಸಾಗಿರುತ್ತದೆ. ಮಾನವೀಯ ರೀತಿ ಬೇರೆಯಾಗಿರಬಹುದು ಆದರೆ ಅಲ್ಲಿಯೂ ಕಾಣದ ಕೈಯ ಕೈವಾಡವನ್ನು ನಾವು ಕಾಣಬೇಕಲ್ಲವೆ? ಹೀಗೆ ಮಾತನಾಡಿದೆವು. ರತಿಲಾಲನ ಗಾಂಭೀರ್ಯ ತುಸು ಹಗುರಾದಂತೆ ಕಂಡಿತು. ಹೋಗುವಾಗ ನಾನು ರತಿಲಾಲನಿಗೆ ಹೇಳಿದೆ: "ಜೀವನವು ಭಗವದ್ಗೀತೆಯಂತೆ; ಹನ್ನೊಂದನೆಯ ಅಧ್ಯಾಯದ ವಿರಾಟದರ್ಶನವೇ ಇಲ್ಲಿಯ ಕಡೆಯ ಮಾತಲ್ಲ. ಇನ್ನೂ ಮುಂದೆ ಅಧ್ಯಾಯಗಳಿರುತ್ತವೆ."

ರತಿಲಾಲನು ಹೋದ ಮೇಲೂ ಹಾಗೆಯೇ ವಿಚಾರಪರನಾಗಿ ನಾನು ಕೆಲವು ಹೊತ್ತು ತೋಟದಲ್ಲಿ ಸುಳಿದಾಡಿದೆ. ಆಮೇಲೆ ಸ್ನಾನಕ್ಕೆಳೆದೆ. ಆದರೆ ಸ್ನಾನಗೃಹದಲ್ಲಿಯೂ ರತಿಲಾಲನ ಸಿದ್ಧಾಂತ ನನ್ನ ಮನಸ್ಸಿನಿಂದ ಮರೆಯಾಗಲಿಲ್ಲ. ಎಂಥ ಅನುಭವಪೂರ್ಣವಾದ ಮಾತು ಅದು! ಅದಕ್ಕೆ ಎಷ್ಟು ಪೈಲುಗಳಿದ್ದವು! ಅದು ಅಕ್ಷರಶಃ ಸತ್ಯವಾದುದು. ಸಹಧರ್ಮಿಣಿಯು ಮಹಾಲಕ್ಷ್ಮಿಯಾಗಿ ಮನೆಗೆ ನಡೆದುಬರುತ್ತಾಳೆ. ಅವಳ ಹೆಜ್ಜೆ-ಹೆಜ್ಜೆಗೂ ಗಂಡಿನ ಹೃದಯ ಪುಲಕಿತವಾಗುತ್ತದೆ. ಆಕಾಶದಲ್ಲಿ ಹೋದಲ್ಲೆಲ್ಲ ತಾರೆಗಳನ್ನು ಸೂರೆಮಾಡುತ್ತ ಬರುವ ನಿಶಾದೇವಿಯಂತೆ ಮಹಾಲಕ್ಷ್ಮಿ ಮನೆಗೆ ಬರುತ್ತಾಳೆ. ಅವಳು ತರುವ ಹೃದಯಸಂಪತ್ತು ಅನುಪಮವಾದುದು. ಸಾಮರಸ್ಯದ ತವರಾಗಿ ಸಾಮಗಾನದ ರಹಸ್ಯವನ್ನು ತಿಳಿಸುವ ದೇವಿಯಾಕೆ. ಆಕೆ ಇರದೆ ಮನೆ ತುಂಬದು; ಮನವೂ ತುಂಬದು. ಗಂಡಿಗೆ ಇನ್ನೆಲ್ಲಿಯೂ ಲಭಿಸದ ಚೆಲುವನ್ನು, ಆನಂದವನ್ನು, ಸೊಗಸನ್ನು ತರುವ ಪವಾಡವಾಕೆ. ಆವಳ ಒಂದೊಂದು ನುಡಿಗೆ ಗಂಡಿನ ಹೃದಯವು ಕಂಪಾನುಕಂಪಾಗುತ್ತದೆ.

ಅವಳ ಒಂದೊಂದು ಉಸಿರಿಗೆ, ಒಂದೊಂದು ಕಿರಣಕ್ಕೆ, ಅವನ ಸ್ವಪ್ನ ಸಾಮ್ರಾಜ್ಯದಲ್ಲಿಯ ಕುಸುಮಗಳು ವಿಕಸಿತವಾಗುತ್ತವೆ. ಅವನ ಹೃದಯಾಂತರದಲ್ಲಿ ಮೂಡಿದ ಸ್ಫೂರ್ತಿ ಆಕೆ. ಇಂಥ ಮಿಲನ, ಐಕ್ಯ, ಇನ್ನೆಲ್ಲಿಯೂ ಅಸಾಧ್ಯ. ದೇವ, ಹೃದಯ, ಆತ್ಮ,—ಎಲ್ಲವೂ ಬೆರೆತು ಒಂದೇ ಸತ್ಯವಾಗಿ ನಿಲ್ಲುವವು. ಗಂಡು ದುಃಖದಲ್ಲಿದ್ದಾಗ ಮೊರೆ ಹೋಗುವದು,—ಈ ಗೃಹಲಕ್ಷ್ಮಿಗೆ.

ಹೀಗೆ ಮನೆಗೆ ಬಂದ ಮಹಾಲಕ್ಷ್ಮಿ ಅಲ್ಲಿ ನೆಲಿಸಿ ಮಹಾಸರಸ್ವತಿಯಾಗುತ್ತಾಳೆ. ಮನೆಯು ಚೊಕ್ಕಟವಾಗಿ ಸ್ವರ್ಗದಲ್ಲಿಯ ಒಂದು ಮಹಲಾಗುತ್ತದೆ. ಸಣ್ಣಪುಟ್ಟ ಮಾತುಗಳಲ್ಲಿಯೂ ಎಂಥ ಪೂರ್ಣತೆಯು ಎದ್ದು ಕಾಣುತ್ತದೆ! ರತಿಲಾಲನ ಮನೆಯಲ್ಲಿ ಈ ಪೂರ್ಣತೆಯು ಕಣ್ಣಿಗೆ ಬಿದ್ದಿತ್ತು. ಹೂವಿನ ಪಾತ್ರೆಯಲ್ಲಿಯ ವಿಧವಿಧದ ಹೂವು, ನಡುಮನೆಯ ಓರಣ, ಅಡಿಗೆಯ ರುಚಿ, ಉಡುಪಿನ ಸೊಗಸು, ಊಟವಾದ ಮೇಲಿನ ಹಿತವಚನ, ಸಂಗೀತ,—ನೂತನ ಸೃಷ್ಟಿಯ ಬ್ರಾಹ್ಮೀದೇವಿಯಾಗಿ ಸಂಸಾರಸೂತ್ರಗಳನ್ನು ಸತಿಯು ಕೈಯಲ್ಲಿ ತೆಗೆದುಕೊಳ್ಳುತ್ತಾಳೆ. ದೇವನ ಸೃಷ್ಟಿಯಂತೆ ಪೂರ್ಣವಾದ ಪ್ರತಿಸೃಷ್ಟಿಯನ್ನು ನಿರ್ಮಿಸುತ್ತಾಳೆ. ಊಟಕ್ಕೆ ಕೂಡುವ ತಾಟಿನ ಕಲಾಯಿ ಹೋಗಿದೆಯೆ? ಅದರ ಜಾಗದಲ್ಲಿ ಶಬ್ದವಿಲ್ಲದೆ ತೋಟದೊಳಗಿನ ಕುಡಿಬಾಳೆಯೆಲೆ ಬಂದು ಕೂತಿರುತ್ತದೆ. ಬಂದ ಅತಿಥಿಗಳಿಗೆ ಶರಬತ್ತು ಕೊಡಬೇಕೆಂದರೆ ನಿಂಬೆಹಣ್ಣು ತೀರಿವೆಯೆ? ಮಾವಿನ ಹೋಳು ಅದರ ಬದಲು ಸಿದ್ಧವಾಗಿರುತ್ತವೆ. ಆಕೆಯ ಹಸ್ತ ಅಮೃತಹಸ್ತ, ಕೈಯಲ್ಲಿಯ ಪಾತ್ರೆ; ಅಕ್ಷಯಪಾತ್ರೆ. ಮನೆಯ ತೋಟ ಪ್ರತಿ ನಂದನ ವನ. ಯಾವುದಕ್ಕೂ ಕಡಮೆಯಿಲ್ಲ. ಸಕಲ ಸೃಷ್ಟಿಯ ಐಶ್ವರ್ಯವನ್ನೆಲ್ಲ ಮನೆಯ ಗಣಿಯಿಂದ ಅಗೆದು ತರಬಹುದು. ಯಾವ ನ್ಯೂನತೆಯೂ ಅಲ್ಲಿ ಕಂಡುಬರಲಾರದು. ತಾನು ಹಿಡಿದ ಹೃದಯದ ವೀಣೆಯ ಒಂದೊಂದು ತಂತಿಯನ್ನು ಸಹಜವಾಗಿ ಮೀಟುವಾಗ ಸಹ ಒಂದೂ ಅಪಶ್ರುತಿಯಿಲ್ಲ ಈ ಮಹಾಸರಸ್ವತಿಯ ಸೋಂಕಿನಲ್ಲಿ.

ಮತ್ತೆ ಮಹಾ ಸರಸ್ವತಿಯು ಮಾಹೇಶ್ವರಿಯೂ ಅಹುದು ಅವಳ ಜಾಣ್ಮೆ ದೈವದತ್ತವಾದುದು. ಗಂಡು ದಂಗುಬಡಿದು ಕುಳಿತಾಗ ಹೆಣ್ಣು

ಹೃದಯವು ಮಾತ್ರ ಅವನಿಗೆ ದಾರಿ ತೋರಬಲ್ಲದು ಜಟಿಲ ವ್ಯವಹಾರಿಕ ಸಮಸ್ಯೆಗಳು ಗಂಡನನ್ನು ದಿಙ್ಮೂಢವಾಗಿಸಿದರೂ ಸತಿಯು ಲೀಲಾಮಾತ್ರವಾಗಿ ಆ ಸಮಸ್ಯೆಗಳನ್ನು ಬಿಡಿಸಬಲ್ಲಳು. ಅಲ್ಲದೆ ಜಗತ್ತಿನಲ್ಲಿಯ ಅವ್ಯಕ್ತ ಶಕ್ತಿಗಳು ಅವಳ ಅಂಕಿತದಲ್ಲಿ. ಗಂಡಿನ ಭವಿಷ್ಯ ಅವಳ ಸ್ವಪ್ನದರ್ಶನಗಳಲ್ಲಿ ನಿಚ್ಚಳವಾಗಿ ಕಾಣುವದು. ಬರುವ ತೊಂದರೆಗಳ ಪೂರ್ವಸೂಚನೆಯನ್ನು ಕೊಟ್ಟು ಸತಿಯು ಗಂಡನನ್ನು ಎಚ್ಚರಿಸುವಳು. ಒದಗಲಿರುವ ಶುಭವನ್ನು ತಿಳಿಸಿ ಅವನನ್ನು ಹುರಿದುಂಬಿಸುವಳು. ಅವನ ಪ್ರಗತಿ ಕುಂಠಿತವಾಗದಂತೆ ಪರಾ ಶಕ್ತಿಯಾಗಿ ಉಚ್ಚ ಚಿನ್ಮಯತೆಗೆ ಅವನನ್ನು ಕರೆದೊಯ್ಯುವಳು....

ಆದರೆ ಈ ಮಹಾಮಾಯೆ ಮಹಾಕಾಳಿಯಾದರೆ? ದುರ್ಗೆಯು ಅವ ತಾರ ಮಾನವನಲ್ಲಿಗ್ದ ಸುಷುಪ್ತ ಶಕ್ತಿಯನ್ನು ಪ್ರಕಟಗೊಳಿಸುವದಕ್ಕಂತೆ ಆದರೆ ಆ ವಿರಾಡ್‌ದರ್ಶನವನ್ನು ಅರ್ಜುನನಂಥ ವೀರನು ಸಹ ಅರಗಿಸ ಲಾರ. ರತಿಲಾಲನ ಗಾಂಭೀರ್ಯವೂ ಅರ್ಜುನನ ಗಾಂಡೀವವೂ ಈ ವಿಷಯದಲ್ಲಿ ಒಂದೇ ಎಂದು ಹೇಳಬೇಕು ಮಹಾಕಾಳಿಯು ಗಂಡಿನ ಭಕ್ತಿ ಯನ್ನು ಜಾಗ್ರತಗೊಳಿಸುವ ವಿಧಾನಗಳು ಅನೇಕವಾಗಿವೆ. ಉಪವಾಸ ಮಲಗಿಬಿಡುವದು, ತಿಂಗಳುಗಟ್ಟಲೆ ಮೌನವ್ರತವನ್ನು ಪಾಲಿಸುವದು, ಆರ್ಭಟದಿಂದ ಒದರಾಡುವದು, ಒಂದು ಮಾತಿಗೆ ಇನ್ನೊಂದರ ಸಂದರ್ಭ ವನ್ನು ಪವಣಿಸಿ ಹಂಗಿಸುವದು,—ಈ ಸತ್ಯಾಗ್ರಹಕ್ಕೆ ವಿಜಯವು ಕಟ್ಟಿಟ್ಟದ್ದೆ! ಆದರೆ ಅದರಿಂದಾದ ಗಂಡಿನೆದೆಯ ತಲ್ಲಣವನ್ನು ಬಣ್ಣಿಸುವರಾರು? ಸಾಕ್ರೇ ಟೀಸನ ಸಹಧರ್ಮಿಣಿ ಸದಾ ಮುಸುಗುಟ್ಟುವ ಮಹಾಕಾಳಿಯಾಗಿದ್ದಳಂತೆ! ಒಂದು ದಿನ ಮನೆಯೆಲ್ಲ ಮೋಡಗವಿದು ಗುಡುಗು-ಮಿಂಚಿಗೆ ಪ್ರಾರಂಭವಾ ಗಿತ್ತು. ಇದರ ಅಭ್ಯಾಸವಾಗಿ ಇದರಿಂದ ತನ್ನ ಅಂತಃಶಕ್ತಿಯನ್ನು ಬೆಳಿಸಿ ಕೊಂಡಿದ್ದ ಸಾಕ್ರೆಟೀಸ್ ಶಾಂತನಾಗಿ ಹೊರಗೆ ಕುಳಿತಿದ್ದ. ಕೊನೆಗೆ ಅವನ ನಿಶ್ಚಿಂತ ವೃತ್ತಿ ಸಹನವಾಗದ ಅವನ ಸಹಧರ್ಮಿಣಿ ಒಂದು ಕೊಡ ನೀರು ತಂದು ತಲೆಯ ಮೇಲೆ ಸುರುವಿದಳಂತೆ. ಆಗ ಸಾಕ್ರೆಟೀಸ್ ಶಾಂತ ನಗೆಯನ್ನು ನಕ್ಕು, "ಇಲ್ಲಿಯವರೆಗೆ ಮೋಡಗವಿದು ಗುಡುಗಿತ್ತು. ಇನ್ನು ಮಳೆಯಾಗದೆ ಇರಲಾರದೆಂದು ಭಾವಿಸಿಯೇ ಇದ್ದೆ" ಎಂದನಂತೆ. ಆ ಶಕ್ತಿಯಿದ್ದರೆ ರತಿ ಲಾಲನೂ ಸಾಕ್ರೆಟೀಸನಾಗುತ್ತಿದ್ದ. ಅದಿಲ್ಲವೆಂದೇ ಅವನು ಗಂಭೀರನಾಗಿದ್ದ.

ಗೀತೆಯ ಹದಿನೆಂಟು ಅಧ್ಯಾಯಗಳಲ್ಲಿ ಒಂದು ಅಧ್ಯಾಯದಲ್ಲಿ ಮಾತ್ರ ವಿಶ್ವರೂಪದರ್ಶನವು ಬರುತ್ತದೆ. ಅದಕ್ಕೇ ಭಯಭೀತನಾಗಿ ಮಣಿದು "ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವ ವಿಶ್ವ ಮೂರ್ತೇ" ಎಂದು ಅರ್ಜುನನು ಬೇಡಿಕೊಂಡ. ಆದರೆ ಹೆಜ್ಜೆಹೆಜ್ಜೆಗೆ ಮಹಾಕಾಳಿಯು ಪ್ರಕಟಳಾದರೆ? ಆಗೇನು ಮಾಡುವದು? ಇದೆಲ್ಲ ನನ್ನ ಅಂತಃಶಕ್ತಿಯ ಅಭಿವೃದ್ಧಿಗಾಗಿ ಎಂಬ ಶ್ರದ್ಧೆಯೊಂದನ್ನುಳಿದು ಇನ್ನಾವ ಕೈ ಕಾಯಬಹುದು?

ಈ ಅವತಾರವನ್ನು ಅರಗಿಸಿಕೊಂಡಾಗ ಮಾತ್ರ ಸತಿಯ 'ಆನಂದ ಮಯಿ' ಅವತಾರವನ್ನು ಕಾಣಬಹುದು. ಆದರೆ ಇದನ್ನು ಅರಗಿಸಿಕೊಳ್ಳುವ ಬಗೆ ಹೇಗೆ? ಮಹಾಸರಸ್ವತಿ ಮಹಾಲಕ್ಷ್ಮಿ. ಮಾಹೇಶ್ವರಿಯರನ್ನು ನೆನೆಸಿ "ಅವರು ಯಾವ ತಾಣದಲ್ಲಿ ಕಂಡರೋ ಅಲ್ಲಿಯೇ ಮಹಾಕಾಳಿಯೂ ಪ್ರಕಟಳಾದಳು; ಹೀಗಾಗಿದ್ದ ಅಂತಃಶಕ್ತಿಯ ಅಭಿವೃದ್ಧಿಗಾಗಿ ಮಹಾಕಾಳಿ ಮತ್ತೆ ಮಹಾಲಕ್ಷ್ಮಿ ಆಗಬಹುದು," ಎಂದು ಎದುರು ನೋಡದೆ ಬೇರೆ ಗತಿ ಏನು?....

ಹೀಗೆಯೇ ನನ್ನ ಸ್ನಾನ-ಧ್ಯಾನಗಳು ನಡೆದಿದ್ದವು. ಇದು ಎಷ್ಟು ಹೊತ್ತು ಮುಂದುವರಿಯುತ್ತಿತ್ತೋ ಹೇಳಲಾಗುವದಿಲ್ಲ. ಆದರೆ ಇಷ್ಟರಲ್ಲಿಯೆ ನನಗೆ ಗೊತ್ತಿದ್ದ ಒಂದು ಕೈ ಬಾಗಿಲ ತಟ್ಟಿ ನನಗೆ ಗೊತ್ತಿದ್ದ ಒಂದು ದನಿ ನುಡಿಯಿತು: "ಏಳ್ರಿನ್ನ! ಎಷ್ಟು ಹೊತ್ತು ಸ್ನಾನ ಮಾಡೋದು! ಆಫೀಸು ಇಲ್ಲಾಂತ ಅಗಸ್ತ್ಯನ ಸ್ನಾನ ನಡಸೀರೇನು ಇವತ್ತ! ಮೈ ತೊಳಕೋ ಬೇಕು ನಾನು, ಅಡಿಗ್ಗೆ ಹೊತ್ತಾತು!"

ನನ್ನ ಮೈ ಜುಮ್ಮೆಂದಿತು. ರತಿಲಾಲನ ಭಾಗ್ಯ-ದುರ್ಭಾಗ್ಯಗಳನ್ನು ತೂಗುತ್ತ ಕುಳಿತಿದ್ದ ನಾನು ಇದೇನು ಮಾಡಿದೆ! ನನ್ನ ಅಜಾಗರೂಕತೆ ಯಿಂದ ನನ್ನ ಮಹಾಸರಸ್ವತಿಯೂ ಮಹಾಕಾಳಿಯಾಗಿ ಪಲ್ಲಟಗೊಂಡರೆ!

ಲಗುಬಗೆಯಿಂದ ಎದ್ದು ಸ್ನಾನಗೃಹದಿಂದ ಹೊರಗೆ ಬಂದಾಗ ಅದೇ ಅಂಚೆಯವನು ಬಂದು ಒಂದು ಪತ್ರವನ್ನು ಇಟ್ಟುಹೋಗಿದ್ದ. ಅದು ಕರ್ಮ ಯೋಗಿಯ ಸಹಸಂಪಾದಕರದು. "ಆಧುನಿಕ ಸಾಹಿತ್ಯಗಳಲ್ಲಿ ಹೆಂಗಸು ಗಂಡಸನ್ನು ಕಾಣುವ ದೃಷ್ಟಿ" ಎಂಬ ವಿಷಯದ ಮೇಲೆ ಒಂದು ಲೇಖವನ್ನು ಬರೆದು ಕಳಿಸಬೇಕಾಗಿ ಒಲುಮೆಯ ಒತ್ತಾಯ ಮಾಡಿದ್ದರು. ಆದರೆ

"ಗಂಡಸು ಹೆಂಗಸನ್ನು ಕಾಣುವ ದೃಷ್ಟಿ" ಯ ಬಗ್ಗೆ ಇಡಿ ಬೆಳಗೆಲ್ಲ ಧೇನಿಸಿದ ನನಗೆ "ಹೆಂಗಸು ಗಂಡಸನ್ನು ಕಾಣುವ ದೃಷ್ಟಿ" ಯು ಒಮ್ಮೆಲೆ ಹೇಗೆ ಹೊಳೆಯಬೇಕು? ಮೇಲಾಗಿ ಇಂದು ರವಿವಾರ. ರವಿವಾರವೇಕೆ ಕರ್ಮಯೋಗಿ ಯ ಗುಡುಗು? ಆದರೆ ಭಾವನೆಗೆ ಇರಬೇಕಾದ ಸ್ಥಳ ಕರ್ಮಯೋಗಿಯಲ್ಲಿದ್ದ ಮೇಲೆ ರವಿವಾರದಲ್ಲಿಯೂ ಉಚಿತ ಕರ್ಮಕ್ಕೆ ಏಕೆ ಸ್ಥಾನವಿರಬಾರದು? ಹೀಗೆಂದು "ಗಂಡಸು ಹೆಂಗಸನ್ನು ಕಾಣುವ ದೃಷ್ಟಿ" ಯ ಮೇಲೆಯೇ ಒಂದು ಲೇಖವನ್ನು ಬರೆದು ಅವರಿಗೆ ಕಳಿಸಿದೆ. ಹಾಗೆ ನೋಡಿದರೆ ಗಂಡಸು ಹೆಂಗಸನ್ನು ಕಾಣುವ ದೃಷ್ಟಿಯೆಂದರೇ ಹೆಂಗಸು ಗಂಡಸನ್ನು ಕಾಣುವ ದೃಷ್ಟಿಯೆಂದು ಹೇಳಬೇಕು. ಹೆಣ್ಣು ಹೇಗೆ ಗಂಡಿಗೆ ಅನನ್ಯವೋ ಏಕಮಾತ್ರವೋ (ಜಾತಿ, ವ್ಯಕ್ತಿಯೂ ಏಕ ಮಾತ್ರವೇ ಇರಬೇಕು) ನಾವೀನ್ಯಪೂರ್ಣವೋ ಹಾಗೆ ಗಂಡೂ ಹೆಣ್ಣಿಗೆ ಅಹುದು. ಮಹಾಸರಸ್ವತಿ, ಮಹಾಲಕ್ಷ್ಮಿ, ಮಹಾಕಾಳಿ, ಮಾಹೇಶ್ವರಿ ಈ ಹೆಸರುಗಳಿಗೆ ಅನುಕ್ರಮವಾಗಿ ಬ್ರಹ್ಮ, ವಿಷ್ಣು, ರುದ್ರ, ಪುರಷೋತ್ತಮ ಎಂಬ ನಾಮಗಳನ್ನು ಅಳವಡಿಸಿದರೆ ಹೆಂಗಸು ಗಂಡಸನ್ನು ಕಾಣುವ ದೃಷ್ಟಿಯು ಗೊತ್ತಾಗುತ್ತದೆ. ಗಂಡಸು ರುದ್ರನಾಗಿ ಹೆಂಗಸನ್ನು ಕಾಡಿದ್ದಾನೆ; ಕೃಷ್ಣಾವತಾರವನ್ನು ಬರಿ ಸ್ಥೂಲದಲ್ಲಿ ನೆನೆದು ಹೆಂಗಸನ್ನು ಬರಿ ಉಪಭೋಗದ ಸಾಧನೆಯನ್ನಾಗಿ ಮಾಡಿದ್ದಾನೆ; ಬ್ರಹ್ಮನಾಗಿ ಗಂಡಿಗಿಂತ ಹೆಣ್ಣಿನ ಸಂಖ್ಯೆಯನ್ನು ಜಗತ್ತಿನಲ್ಲಿ ಹೆಚ್ಚಿಸಿ ಅನಾಹುತಗಳಿಗೆ ಕಾರಣನಾಗಿದ್ದಾನೆ; ಪುರಷೋತ್ತಮನೆಂದು ತಿಳಿದುಕೊಂಡು ಹೆಣ್ಣನ್ನು ಸೇವೆಗೆ ನಿಂತ ದಾಸಿಯನ್ನಾಗಿ ಮಾಡಿದ್ದಾನೆ. ಆದರೆ ಬ್ರಹ್ಮನಾಗಿ ಹೆಣ್ಣಿಗೋಸ್ಕರ ಅವನು ಸೃಷ್ಟಿಯನ್ನು ಇನ್ನೂ ನೂತನವಾಗಿಸಬೇಕು; ವಿಷ್ಣುವಾಗಿ ಗೃಹಲಕ್ಷ್ಮಿಯೊಡನೆ ಬೆರೆತು ಸಾಮರಸ್ಯವನ್ನು ಹೆಚ್ಚಿಸಬೇಕು. ರುದ್ರನಾಗಿ ಅವಳ ಗತಾನುಗತಿಕತೆಗಳ ಮೇಲೆ ಸಿಡಿಲೆರಗಿಸಬೇಕು; ಪುರುಷೋತ್ತಮನಾಗಿ ಅವಳನ್ನು ಉಜ್ಜೀವನದ ಉಡ್ಡಾಣಕ್ಕೆ ಕರೆದೊಯ್ಯಬೇಕು. ತಾನು ಅರ್ಧನಾರೀಶ್ವರನೆಂದು ತಿಳಿಯದ ಹೊರತು ಗಂಡಿಗೆ ಇನ್ನೊಂದು ಗತಿಯಿಲ್ಲ; ಜಗತ್ತಿಗೆ ಕಲ್ಯಾಣವಿಲ್ಲ. ಹೀಗೆ ಮುಂತಾಗಿ ಸಮಾಧಾನ ಹೇಳಿ ಅವರು ಕೇಳಿದ ವಿಷಯವನ್ನು ಬಿಟ್ಟು ತದ್ವಿರುದ್ಧವಾದ ವಿಷಯದ ಮೇಲೆ ಲೇಖವನ್ನು ಬರೆದೆ! ಅಂತೂ ಹೀಗೆ ಕಳೆದಿತ್ತು ನನ್ನ ಒಂದು ರವಿವಾರ.

# (೧೦) ರೋಗಿಷ್ಟ ಸಮಾಜದಲ್ಲಿ ದೇಹಾರೋಗ್ಯ

ನಾನು ಒಳಗೊಳಗೆ ಹೇಗೆ ತಲ್ಲೀನನಾಗಬಲ್ಲೆ ? ಸಮಾಜದ ಅನೇಕ ಮುಖವಾದ ಜೀವನದಲ್ಲಿ ಭಾಗವಹಿಸಿ ಅದರಿಂದ ಶಕ್ತಿಯನ್ನು ಪಡೆದು ಶಕ್ತಿಯನ್ನು ಹೇಗೆ ಕೊಡಬಲ್ಲೆ ? ಇದೇ "ಕೂಟಸ್ಥ" ಜೀವದ ಕೂಟ ಪ್ರಶ್ನೆಯಾಗಿದೆ. ಈ ಪ್ರಶ್ನೆಯನ್ನು ಬಿಡಿಸದ ವ್ಯಕ್ತಿ ವ್ಯಕ್ತಿಯಲ್ಲ; ದೇಶವು ದೇಶವಲ್ಲ; ಸಂಸ್ಕೃತಿಯು ಸಂಸ್ಕೃತಿಯಲ್ಲ.

ದೇಹಕ್ಕೆ ಇನ್ನಿಷ್ಟು ಶಕ್ತಿ ಬೇಕು. ತನ್ನ ಆರೋಗ್ಯವನ್ನು ಕಾಯ್ದು ಕೊಳ್ಳುವದಲ್ಲದೆ ಹೊರಗಿನಿಂದ ಬರುವ ಪ್ರಘಾತಗಳನ್ನು ತಡೆದುಕೊಳ್ಳಲು ಅದು ಸಮರ್ಥವಾಗಿರಬೇಕು. ಶುದ್ಧ ಕೋಮಲ ಅಂತಃಕರಣಕ್ಕೆ ಇಂದಿನ ಸಮಾಜದಲ್ಲಿ ತಾಗುವ ಬಾಣಗಳು ನೂರೆಂಟು. ಬೆಳೆಯದ ಸಮಾಜ, ತಪ್ಪುದಾರಿ ಹಿಡಿದ ವ್ಯಕ್ತಿಗಳು, ಸಹನೆಯಿಲ್ಲದ ವರ್ತನೆ, ಅಸಾಧು ಕಾರ್ಯ ಸಾಧಕತೆ, ಒಳ್ಳೆತನ ಬರಿ ಅಳ್ಳೆದೆತನವೆಂಬ ಸಿದ್ಧಾಂತದಿಂದ ಸಾಗಿದ ಕಾರ್ಯ, ಇವೆಲ್ಲ ಅಂತಃಕರಣವನ್ನು ಕಲಮಲವಾಗಿಸುವವು. ಈ ಪ್ರಘಾತದಿಂದ ಎದ್ದ ತೆರೆಗಳು ದೇಹದ ದಂಡೆಯ ಮೇಲೆ ಅಪ್ಪಳಿಸುವವು. ನಾಡಿಗಳು ಹರಿಯುವಂತೆ ಹಾರುವವು. ಕೂದಲು ನರೆಯುವದು. ದೇಹವು ಸಿಥಿಲವಾಗಿ ಅಂತರಂಗದಲ್ಲಿಯ ಮೂರ್ತಿಯ ಕಾಣ್ಕೆಯು ಅಸ್ಪಷ್ಟವಾಗುವದು.

ಇದರೊಳಗಿಂದ ವಿಮೋಚನೆ ? ಪದ್ಮಪತ್ರಮಿವಾಂಭಸಿ,—ಕೊಳದಲ್ಲಿಯ ಕಮಲದೆಲೆಯಂತೆ ಇರಬೇಕು. ನೀಲಕಂಠನಾಗಬೇಕು. ಕೆಸರಿನಲ್ಲಿಯೂ ತಾವರೆಯಂತಿರಬೇಕು. ಮೇಲೆ ಹೇಳಿದ ಎಲ್ಲ ಪ್ರಘಾತಗಳನ್ನು ವಿನೋದಮಯ ಸರಸ ಸಜ್ಜನಿಕೆಯಿಂದ ಕಾಣಬೇಕು. ಧೈರ್ಯದಿಂದ ಸಹಿಸಬೇಕು. ಹೇಳುವದನ್ನು ಹೇಳಿ, ಮಾಡುವದನ್ನು ಮಾಡಿ, ಮತ್ತೆ ಅಲಿಪ್ತವಾಗಿರಬೇಕು. ಒಳಗೊಳಗಿನ ಶಾಂತಿಕೇಂದ್ರವನ್ನು ಇದರಿಂದ ಚಲಿಸಗೊಟ್ಟರಬಾರದು. ಅದು ಸಂಚಲಿತವಾದಾಗ ಪ್ರಾರ್ಥನೆಯಿಂದ ಶಾಂತಿಯನ್ನು ಮತ್ತೆ ಬರಮಾಡಿಕೊಳ್ಳಬೇಕು. ಹೀಗೆ ಮಾಡಿದಲ್ಲಿ ಜೀವನೌಕೆಯಾದ

ದೇಹಕ್ಕೆ ಪ್ರಘಾತವು ತಾಗಲಾರದು. ಅಂತಃಕರಣವು ಅಷ್ಟು ಹಗುರಾಗಿ ಚಲಿಸಲಾರದು. ಕೂಟಸ್ಥ ಜೀವದ ಸುತ್ತಲು ಆಗ ಒಂದು ನಿರ್ಭೇದ್ಯವಾದ ಶಾಂತಿಯ ಕವಚವು ಬೆಳೆಯುವದು.

ದಿನದ ಆರೋಗ್ಯಕ್ಕೆ ಆಸನಗಳು ಸಾಕು. ನಿಯಮಿತ ಊಟ-ನಿದ್ರೆ ಸಾಕು. ಈ ಸುವರ್ಣ ಮಧ್ಯದಿಂದ ಸಹಸಾ ಚಲಿಸಬಾರದು. ಆಟ, ತಿರುಗಾಟ, ಆಸನ,-ಇವು ದೇಹದ ಪ್ರಸನ್ನತೆಯನ್ನು ಕಾಯಬಲ್ಲವು. ಸಾತ್ವಿಕ ಆಹಾರ ಮನಸ್ಸಿನ ಸಾತ್ವಿಕತೆಯನ್ನೂ ಹೆಚ್ಚಿಸಬಲ್ಲದು.

ದೇಹಕ್ಕೆ ನಮಗೆ ಗೊತ್ತಿಲ್ಲದೆ ಅಂಟಿಕೊಂಡ ಅನೇಕ ಚಟಗಳಿರುತ್ತವೆ. ಅವು ರಕ್ತದಲ್ಲಿ-ಉಪಪ್ರಜ್ಞೆಯಲ್ಲಿ ಬೆರೆತುಕೊಂಡಿರುತ್ತವೆ. ತಂಬಾಕು ನರಗಳನ್ನು ಹಿಸುಕಿದರೆ ಕೆಲವೊಂದು ರೂಢಿಗಳನ್ನು ಯಾಂತ್ರಿಕವಾಗಿಯೇ ದೇಹವು ಪೂರೈಸುತ್ತಿರುತ್ತದೆ. ಇವುಗಳ ಪ್ರಾಬಲ್ಯವನ್ನೂ ಲಕ್ಷಣಗಳನ್ನೂ ಕಾಣಬೇಕಾದರೆ ವಾರಕ್ಕೊಮ್ಮೆ ಮೌನವು ಅಗತ್ಯ. ಜಾಗೃತ ಸ್ಥಿತಿಯಲ್ಲಿಯ ಕ್ರಿಯೆ ಕಡಿಮೆಯಾದಾಗ ಇವು ನಮ್ಮ ಲಕ್ಷ್ಯಕ್ಕೆ ಬರುತ್ತವೆ. ಇಲ್ಲದಿದ್ದರೆ ಇವು ನಮ್ಮಲ್ಲಿ ಇವೆಯೆಂದೂ ಗೊತ್ತಾಗುವದಿಲ್ಲ. ಉದಾಹರಣೆಯೆಂದು ಶಬ್ದಗಳೊಡನೆ ಆಟವಾಡುವ ಚಟವನ್ನು ತೆಗೆದುಕೊಳ್ಳಬಹುದು. 'Bar' ಎಂದೊಡನೆ 'Debar' 'ಪೀಕು' ಎಂದೊಡನೆ 'ಪೀಕಲಾಟ'—ಹೀಗೆ ಒಮ್ಮೊಮ್ಮೆ ವಿಶೇಷ ಅರ್ಥವಿಲ್ಲದೆ ಶಬ್ದಗಳ ನಾದ-ಪ್ರತಿನಾದವು ಮನಸ್ಸಿನಿಂದ ಹೊರಹೊಮ್ಮುತ್ತದೆ ಇಂಥ ಎಲ್ಲ ಯಾಂತ್ರಿಕ ಕ್ರಿಯೆಗಳನ್ನು ನಾವು ಆಗ ಪರೀಕ್ಷಿಸುವದರಲ್ಲಿ ತೊಡಗುತ್ತೇವೆ.

ನಮ್ಮಲ್ಲಿ ಇಲ್ಲವೆ ನಮ್ಮಿಂದ ನಡೆಯುವ ಎಲ್ಲ ವ್ಯಾಪಾರಗಳ ಮೇಲೆ ನಮ್ಮ ಪ್ರಭುತ್ವವು ಬೇಕು. ದೇಹವು ಒಂದು ಕುದುರೆ, ಒಂದು ಅದ್ಭುತ ಯಂತ್ರ ಯಂತ್ರಾರೂಢರು ನಾವು. ನಮಗೆ ಗೊತ್ತಿಲ್ಲದೆ ಯಾವ ಸ್ವಭಾವ ಲಕ್ಷಣಗಳನ್ನೂ ಅದು ಪಡೆದುಕೊಂಡಿರಬಾರದು.

ನಿದ್ರೆಯು 'ತಾಮಸಿಕ'ವಿರಬಾರದು. ನಿಯಮಿತವಿದ್ದು,—ನಿದ್ರೆಯಲ್ಲಿಯೂ ಜಾಗೃತಿ ಇಲ್ಲವೆ ಮಧುರ ಸ್ವಪ್ನದ ಸ್ಥಿತಿ ಉಳಿಯುವಂತೆ ನಾವು ಹವಣಿಸಬೇಕು. ಮಲಗುವಾಗ ಮಾಡುವ ಪ್ರಾರ್ಥನೆಯೇ ಇದಕ್ಕೆ ಮದ್ದು. ಶ್ರೀ. ಅರವಿಂದರು ಹೇಳುವಂತೆ,-ಮಲಗುವಾಗ, ಮನಸ್ಸಿಗೆ ನಾವು ಮಾಡಿದ ಆಜ್ಞೆಯು ಕಾಲಾಂತರದಲ್ಲಿಯಾದರೂ ಫಲಿಸುವದು.

# (೧೧) ಹೃದಯವಂತಿಕೆಯ ಸಮಸ್ಯೆಗಳು

ಪ್ರಾಣಮಯತೆಯು ವ್ಯಕ್ತಿತ್ವವೆಂಬ ದೇಹದ ರಕ್ತವಿದ್ದಂತೆ. ಅದು ಜೀವನದ ಜೀವನಶಕ್ತಿ. ಅದು ಉನ್ಮನದ ಶಕ್ತಿಗಳಿಗೆ ವಾಹನವಾಗಬಲ್ಲದು. ಕೆಳಗಣ ಜೀಟಿ ನಾಯಿಗಳಿಗೆ ಸಿಕ್ಕ ಮೊಲವಾಗಬಲ್ಲದು. ಅದರ ಸ್ವರೂಪವನ್ನು ಗುರುತಿಸಿ ನಿಯಂತ್ರಿಸುವ ವಿದ್ಯೆಯನ್ನು ನಾವು ಕಲಿಯಬೇಕು.

ಕಾಮದೊಡನೆ ಪ್ರೇಮದ ಒಂದು ಆವಿರ್ಭಾವವು— ಸ್ತ್ರೀ ಪುರುಷ ಪ್ರೇಮವು ಅವಿರಳವಾಗಿ ಬೆರೆತುಕೊಂಡಿದೆಯಷ್ಟೆ? ಮಾವಿನ ಚಿಗುರೆಲೆಯ ಹೊಗರು ಪ್ರೇಮ; ಸ್ವತಃ ಕಾಮವೇ ಆ ಚಿಗುರೆಲೆ: ಹೀಗಿದೆ ಪ್ರೇಮ-ಕಾಮದ ಸ್ಥಿತಿ. ತಾರುಣ್ಯದ ಪ್ರೇಮದಲ್ಲಿ ಈ ಬಗೆಯ ಬೆರಕೆಯಿರುತ್ತದೆ. ವಯಸ್ಸಾದಂತೆ ವಿಂಗಡಿಕೆಯು ತಾನಾಗಿಯೇ ತಲೆದೋರುತ್ತದೆ. ಆಗ ಕಾಮವು ಸಂತಾನಾಭಿವೃದ್ಧಿಯ ನೈಸರ್ಗಿಕ ಕ್ರಿಯೆಯೆಂದೂ, ಪ್ರೇಮವು ಬುದ್ಧಿ-ಮನ-ಹೃದಯಗಳ ಎರಡು ಕೂಟಗಳ ಸಮರಸವೆಂದೂ, ಏಕಮಯತೆಯೇ ಆ ಸಿಂಪಿನೊಳಗಿದ್ದ ಅಮೃತದ ಹನಿಯೆಂದೂ ಗೊತ್ತಾಗುತ್ತದೆ. ಈ ವಿಂಗಡಿಕೆಯನ್ನು ತಿಳಿದು ಅದರಂತೆ ವರ್ತಿಸಬೇಕು. ಕಾಮವು ತ್ಯಾಜ್ಯವೆಂದಲ್ಲ. ದಿವ್ಯಾನಂದದ ವಿಕೃತ ರೂಪವದು. ಜೀವಗಳ ಕೂಟದ ಅಡಿಗಲ್ಲಾಗಿ ದೇಹಗಳ ಕೂಟವಿದೆ ಸಂಯಮವು ಉತ್ತಮವಾದರೂ ಆರ್ಥಿಕ ಸ್ಥಿತಿಯಂತೆ ಸಂತಾನ ನಿರೋಧದಿಂದ ಕುಟುಂಬವನ್ನು ನಿಯಂತ್ರಿಸುವದರಲ್ಲಿ ಕೀಳಾದುದೇನೂ ಕಾಣುವದಿಲ್ಲ. ಆದರೆ ಈ ರೀತಿಯಾಗಿ ಕಾಮವನ್ನು ಅನುಭವಿಸಿದಾಗ ಪ್ರೇಮದ ಅಡಿಗಲ್ಲೆಂದು ಮಾತ್ರ ಅದಕ್ಕೆ ಸ್ಥಾನವಿದೆಯೆಂದು ಸ್ವತಃ ಭೋಗವೇ ಗುರಿಯಲ್ಲವೆಂದೂ ನೆನಸಿಡುವದು ಅಗತ್ಯವಾಗಿದೆ.

ಕ್ರೋಧವು ವ್ಯಾಧನಿದ್ದಂತೆ. ಜೀವನದ ಕೈದೋಟವನ್ನು ಸಹ ಅರಣ್ಯವೆಂದು ತಿಳಿದುಕೊಂಡು ಅದು ಹಾಳುಮಾಡಬಲ್ಲದು. ಹೀಗೆ ಸಿಟ್ಟು ಬಂದಾಗ ರಕ್ತವು ಸುಡುವದಲ್ಲದೆ ಜೀವನದ ಎಣ್ಣೆಯೂ ಸುಡುವದು. ಬತ್ತಿಯೂ ಸಣ್ಣದಾಗುವದು. ಕ್ರೋಧದಲ್ಲಿ ಎರಡು ತರಗಳನ್ನು ವಿಂಗಡಿಸಬಹುದು;

ಒಂದು ಶಿಶಿತನ; ಇನ್ನೊಂದು ಕೊಚ್ಚಿಕೊಂಡು ಬಂದುಹೋಗುವ ಹೊನಲಿ ನಂತಹ ಪ್ರವಾಹ. ಶಿಶಿತನವು ಮನಸ್ಸಿಗೆ ಬಡಿದುಕೊಂಡ ಪಿಶಾಚಿಯಿದ್ದಂತೆ. ಮನಸ್ಸಿನಲ್ಲಿ ಮನೆಮಾಡಿಕೊಂಡು ಮನಸ್ಸನ್ನೇ ಅದು ದಿನಾಲು ತಿನ್ನು ವದು. ಪಂಚತಂತ್ರದಲ್ಲಿ ಹೇಳಿದ ಗಂಗದತ್ತ ಎಂಬ ಕಪ್ಪೆಯ ಬಾವಿಯಲ್ಲಿ ಇದ್ದ ಪ್ರಿಯದರ್ಶನ ಎಂಬ ಸರ್ಪದಂತೆ ಈ ಶಿಶಿತನವಿದೆ. ಇದನ್ನು ಹೊರಗೆ ಹಾಕಿರಬೇಕೆ ಹೊರತು ಗಂಗದತ್ತನೇ ತನ್ನ ಬಾವಿಯನ್ನು ಬಿಟ್ಟು ಹೋಗಿರ ಬಾರದು. ಇದಕ್ಕೆ ಒಂದೇ ಒಂದು ಹಾದಿಯಿದೆ; ಸಹನೆ ಇಲ್ಲವೆ ತಾಳ್ಮೆ; ನೈಸರ್ಗಿಕ ಮಾನಸಿಕ ಚಲನದ ಮೇಲೆ ಲಕ್ಷ್ಯಪೂರ್ಣ ಪ್ರಭುತ್ವ ಈ ಪ್ರಭು ತ್ವವು ಅಭ್ಯಾಸ ಬಲದಿಂದ ಸಾಧ್ಯ. ಮೌನವು ಅದಕ್ಕೆ ಸಹಾಯಕಾರಿ ತಾಳ್ಮೆ-ಮೌನಗಳಿಂದ ಶಿಶಿತನವನ್ನು ಗೆಲ್ಲಬೇಕು. ಮಾನವೀಯ ಅಪೂರ್ಣ ತೆಯನ್ನು ಕರುಣಾಪೂರಿತ ದೃಷ್ಟಿಯಿಂದ ನೋಡುವದರಿಂದ ಇದು ಸಾಧ್ಯ ವಾದೀತು.

ಕೊಚ್ಚಿಕೊಂಡು ಬರುವ ಕ್ರೋಧವು ಎಂಥ ಅಣೆಕಟ್ಟನ್ನಾದರೂ ಕೋಡಿವರಿದು ಬರಬಲ್ಲದು. ಇದು ಬಂದಾಗ— ಸಮುದ್ರದಲ್ಲಿಯ ತರಂಗವು ಸಮುದ್ರದಲ್ಲಿಯೇ ಲೀನವಾಗುವಂತೆ ಚಿತ್ತದಲ್ಲಿ ಹುಟ್ಟಿದ ಅದು ಚಿತ್ತದ ಲ್ಲಿಯೇ ಲೀನವಾಗುವಂತೆ ನೋಡಿಕೊಳ್ಳಬೇಕು. ಆಗ ಜ್ಞಾತೃವು ಕರ್ತೃವಾಗ ಬಾರದು. ಚಿತ್ತದಲ್ಲಿಯೇ ಆ ಪ್ರವಾಹವು ಮತ್ತೆ ಲೀನವಾಗಬೇಕು. ರಸ ವಂತಿಕೆಯ ಅನಾಸಕ್ತಿಯಿಂದ ವ್ಯಕ್ತಿಯು ಈ ಬಿರುಗಾಳಿಯನ್ನು ಅನುಭವಿಸ ಬೇಕು. ಆಗ ಅವನ ಜೀವನನೌಕೆಗೆ ಅಪಾಯವಿಲ್ಲ.

ಒಮ್ಮೊಮ್ಮೆ ದೈನಂದಿನದ ವ್ಯವಹಾರದಲ್ಲಿ ಸಿಟ್ಟು ಅಗತ್ಯವೆಂದು ತೋರಬಹುದು. ಆಳು ಹದಗೇಡಿಯಾದರೆ, ಮಗು ಗೊಂದಲ ಹಾಕಿದರೆ, ಕೈಕೆಳಗಿನವರು ಕರ್ತವ್ಯವನ್ನು ದುರ್ಲಕ್ಷಿಸಿದರೆ— ಸಿಟ್ಟಾಗಬೇಕಾಗುತ್ತದೆ. ಆದರೆ ಸಿಟ್ಟಾಗುವದು ಬೇರೆ ಹಾಗು ಆಗಬೇಕಾಗುವದು ಬೇರೆ ಎಂಬುದನ್ನು ನಾವು ನೆನೆಯಬೇಕು. ಅದೊಂದು ಪಾತ್ರವನ್ನು ವಹಿಸಿದಂತೆ. ಲಿಯರ್ ರಾಜನಾದ ನಟನ ಕ್ರೋಧಾವೇಶ ಆ ನಟನದಲ್ಲವಷ್ಟೇ ? ನಾವು ಲಿಯರ್ ಆಗಬಾರದು. ಲಿಯರ್ ರಾಜನ ಪಾತ್ರವನ್ನು ವಹಿಸಿದ ನಟ ರಾಗಬೇಕು.

ಅಸೂಯೆ ಯು ವ್ಯಕ್ತಿತ್ವದ ಘಟಕಕ್ಕೆ ಇದ್ದ ತೂತು. ಇಂಥ ರಂಧ್ರವು ಇದ್ದ ಪಕ್ಷದಲ್ಲಿ ವ್ಯಕ್ತಿತ್ವದ ಸಾರವು ಹನಿಹನಿಯಾಗಿ ವ್ಯಯಿಸಿ ಹೋಗುವ ದುಂಟು. ಅದು ಹಾವಿನ ವಿಷವಿದ್ದಂತೆ. ವ್ಯಯಿಸಿದಷ್ಟು ವಿಷ ಮತ್ತೆ ಆ ರಚನೆ ಯಲ್ಲಿ ಸಂಗ್ರಹವಾಗುತ್ತ ನಡೆದು ವ್ಯಕ್ತಿತ್ವದ ಶರೀರದಲ್ಲಿಯೇ ವಿಷದ ಉಗ ಮಕ್ಕೆ ಒಂದು ಸ್ಥಾನವು ದೊರೆಯುವದು. ಕೀಳು ಜನರ ಉತ್ಕರ್ಷವನ್ನು ಸಹ ಅಸಹನೆಯಿಂದ ನೋಡಬಾರದು. ತನಗೆ ಗೊತ್ತಿದ್ದ ಕಾರಣಗಳಿಗೋ ಸ್ಕರ ದೈವಚಿತ್ತ ಆ ಉತ್ಕರ್ಷವನ್ನು ದಯಪಾಲಿಸಿರುತ್ತದೆ. ಅದನ್ನು ನಾವು ಎದುರಾಡಬಾರದು. ಅದರಿಂದ ನಮ್ಮ ಮೇಲಾಗುವ ಪ್ರಘಾತಗಳನ್ನು ಮಾತ್ರ ನಾವು ತಾಳ್ಮೆಯಿಂದ ಹಾಗು ಎಚ್ಚರದಿಂದ ತಡೆದುಕೊಳ್ಳಬೇಕು. ದೈವಚಿತ್ತವೆಂದು ಅದನ್ನು ಒಪ್ಪಿದರೂ ನಾವು ಅದಕ್ಕೆ ಮಣಿದಿರಬಾರದು ಅದರಿಂದೊದಗುವ ಅನ್ಯಾಯಕ್ಕೆ ನಮ್ಮ ಅನುಮತಿಯನ್ನು ಕೊಟ್ಟಿರಬಾರದು ದೈವಸಂಕಲ್ಪದಂತೆ ಅದರ ಪರಿಣತವಿರುತ್ತದೆ. ಇಲ್ಲವೆ ನಮಗಿಂತ ಮೇಲಿನವ ರನ್ನು ಕಂಡು ಅಸೂಯೆಪಟ್ಟಿರಬಾರದು:

" ತನ್ನ ಕಿರಣ ತನಗೆ ಹಗಲು
ಉಳಿದ ಬೆಳಕು ಕತ್ತಲು. "

ಲೋಭ ಇಲ್ಲವೆ ಅದರ ಬುಡಕ್ಕಿರುವ ಆಸೆ ನೀರುಬಿಡುವ ನಾಲಗೆ ಯಂತೆ ಸದಾ ಜಿನುಗುತ್ತಿರುವದು. ಅದಕ್ಕೆ ತೃಪ್ತಿಯೇ ಇಲ್ಲ "This mans' art and that mans' scope" ಎಂದು ಶೇಕ್ಸ್‌ಪಿಯರ್ ಹೇಳುವಂತೆ- ತನ್ನಲ್ಲಿದ್ದುದನ್ನು ಮರೆತು ಇಲ್ಲದುದನ್ನು ತನ್ನ ಸುತ್ತಣ ಸಮಾಜದಲ್ಲಿ ಇಲ್ಲವೆ ಸೃಷ್ಟಿಯಲ್ಲಿ ಅಲ್ಲಲ್ಲಿ ಕಂಡು ಲೋಭಿಯು ಅದಕ್ಕಾಗಿ ಸದಾ ಹಲುಬುವನು. ಅವನ ಕೊರತೆಯು ಲೋಭದಿಂದ ಅವನನ್ನು ಇನ್ನಿಷ್ಟು ಕೊರೆಯುವದು. ಲೋಭಿಯು ಎಲ್ಲರಂತೆ ಅಪೂರ್ಣವಾಗಿರುವದಲ್ಲದೆ ತನ್ನ ಅಪೂರ್ಣತೆಯ ನರಕದಲ್ಲಿ ಪ್ರತಿನಿತ್ಯ ಕೊಳೆಯುವನು. ವ್ಯಕ್ತಿತ್ವದ ಶುದ್ಧಪ್ರವಾಹವು ಆಗ ಚರಂಡಿಯ ನೀರಾಗುವದು. ಪ್ರತಿಯೊಬ್ಬ ವ್ಯಕ್ತಿಗೆ ಅವನ ವಿಕಾಸಕ್ಕೆ ಆವಶ್ಯವಾದ ಸೌಕರ್ಯಗಳಿರುತ್ತವೆ, ಕೊರತೆಗಳಿರುತ್ತವೆ. ಅನುಕೂಲತೆ ಯಂತೆ ಕೊರತೆಯೂ ಒಂದು ಅವಶ್ಯ ಸಾಧನವೆಂದರಿತು ನಾವು ನಿಶ್ಚಿಂತ ರಾಗಬೇಕು. ಇಲ್ಲವಾದುದು,-ನಮ್ಮ ವಿಕಾಸಕ್ಕೆ ಬೇಕಾಗದ ಸೌಕರ್ಯವೆಂದೇ

ನಮಗೆ ಇಲ್ಲ. (ಹೀಗೆ ಹೇಳುವದು ವ್ಯಕ್ತಿಯ ದೃಷ್ಟಿಯಿಂದ; ಸಮಾಜದ ದೃಷ್ಟಿಯಿಂದಲ್ಲ.) ಸಮರ್ಪಣೆ ಮತ್ತು ಸಂತೃಪ್ತ ಸ್ವೀಕಾರ,—ಇವು ಸಾಧನೆಗೆ ಅತ್ಯವಶ್ಯವಾದುವು. ಇಚ್ಛೆಯೇನಾದರೂ ಇದ್ದರೆ,—ಅದನ್ನೆಲ್ಲ ದೈವಿಕ ಜೀವನವು ಬೇಕೆಂಬ ಹಂಬಲವಾಗಿ ಮಾರ್ಪಡಿಸಬೇಕು. 'I want the Divine and nothing else' ಎಂಬ ಮಂತ್ರ ಸದಾ ಮನದ ದೇಗುಲದಲ್ಲಿ ಮೊಳಗುತ್ತಿರಬೇಕು. ಇಂಥ ಏಕಮೇವತೆಯಿಂದ ಮಾತ್ರ ಜೀವನವು ಬೆಳಗಬಲ್ಲದು.

ಮಹತ್ವಾಕಾಂಕ್ಷೆಯು ಉರಿಯ ನಾಲಗೆಯಿದ್ದಂತೆ. ಅದಕ್ಕೆ ಇಂಧನವು ದೊರೆತಲ್ಲಿ ಅದು ಚಿದಾಕಾಶವನ್ನೇ ವ್ಯಾಪಿಸಿ ಅದನ್ನೆಲ್ಲ ಹೊಗೆಯಿಂದ ತುಂಬಿಬಿಡುವದು. ಕೀರ್ತಿ, ಸಂಪತ್ತು, ಅನುಪಮ ಸುಖ–ಇವಕ್ಕೆ ಮಿತಿಯೇ ಇಲ್ಲ. ಆಕಾಂಕ್ಷೆಯು ಉದ್ಬುದ್ಧವಾದಂತೆ ಅದರ ಗುರಿಯೂ ಮಿತಿಯಿಲ್ಲದೆ ಮುಂದೆ ಸರಿಯುತ್ತ ಹೋಗುವದು. ಮುದುಕನ ಹೆಗಲೇರಿ ಕುಣಿಯುವ ತರುಣನೆಂದರೇ ಆಕಾಂಕ್ಷೆ ಎಂದು ಅಂಬಿಕಾತನಯ ದತ್ತರು 'ಹಸಿಕಂಬಲ' ದಲ್ಲಿ ಸೂಚಿಸಿದ್ದಾರೆ Keats ಕವಿಯ Ode to Indolence ಎಂಬ ಕವನವನ್ನು ಈ ಸಂದರ್ಭದಲ್ಲಿ ಓದಿಕೊಳ್ಳಬೇಕು. ಕೀರ್ತಿ, ಪ್ರೀತಿಯ ಸಾಫಲ್ಯ, ಕಾವ್ಯಮಯ ವೃತ್ತಿ,— ಇವು ಮೂರೂ ಬೇಕಾದುವು. ಆದರೆ ಒಂದು ಬಣ್ಣದ ಗಡಿಗೆಯ ಮೇಲೆ ಬರೆದ ಮೂರು ಚಿತ್ರಗಳಂತೆ, ಇವು ಬರಿ ಛಾಯೆಗಳು. ಸಮಾಧಿಸ್ಥ ಜೀವನವೇ ಸಂತೃಪ್ತಿ ಹಾಗು ವಿಕಾಸದ ಮೂಲವೆಂಬುದನ್ನು ಕೀಟ್ಸ್ ಕವಿ ಮನೋಹರವಾಗಿ ತೋರಿಸಿದ್ದಾನೆ.

ಲೋಭವು ಇಲ್ಲದುದಕ್ಕಾಗಿ ಜಿನುಗುವ ನಾಲಗೆಯಾದರೆ ಮೋಹವು ಪ್ರಿಯವಿದ್ದುದನ್ನು ನೇವರಿಸುವ ತೋಳು, ಕೈಯ್ಯ ಬಳ್ಳಿ ಒಂದು ಲತೆಯು ವಿಧವಿಧದ ಪಾಂಗಿನಲ್ಲಿ ಮರವನ್ನಪ್ಪುವಂತೆ ಪ್ರಿಯವಾದ ವಸ್ತುಗಳಿಗೆ ಮನಸ್ಸು ತನ್ನನ್ನು ಮಾರಿಕೊಂಡಿರುವದು. ಒಂದೊಂದು ವಸ್ತುವು ಕಳೆದಂತೆ ಚಿತ್ತವೃತ್ತಿಯು ಅಸಹಾಯವಾಗುತ್ತ ನಡೆಯುವದು. ಜೂಲಿಯಟ್ ತೀರಿಹೋದಳೆಂದೂ ತನ್ನ ಜೀವನ ಇನ್ನು ನಿರರ್ಥಕವೆಂದೂ ರೋಮಿಯೊ ಆತ್ಮಹತ್ಯೆ ಮಾಡಿಕೊಂಡ. ಎದೆಯುದ್ದ ಮಗ ಬಿದ್ದುಹೋದನೆಂದು ಮೊನ್ನೆ ರಾಯರು ಎದೆ ಒಡೆದುಕೊಂಡು ಸತ್ತರು. ತನ್ನ ಪ್ರೀತಿಯ ನಾಯಿ-ಕುನ್ನಿ

ಸತ್ತಿತೆಂದು ಒಬ್ಬ ಮಹಿಳೆ ಹೃದ್ರೋಗ ಹಚ್ಚಿಕೊಂಡಳು. ಅಧಿಕಾರ ಹೋಗಿ ಕೈಯೆಲ್ಲ ಬರಿದಾಗಿ ಭಣಗುಟ್ಟುವದೆಂದು ಪೆನ್‌ಶನರ್ ಜೀವ ಬಿಟ್ಟ. ಇಂಥ ಉದಾಹರಣೆಗಳಿಗೆ ಲೆಕ್ಕವಿಲ್ಲ. ನೂರಾರು ಪ್ರಿಯವಾದ ವಸ್ತುಗಳಿಗೆ ತನ್ನತನವನ್ನು ಧಾರೆಯೆರೆದು ಮನಸ್ಸು ಸದಾ ಕೊರಗುತ್ತಿರುವದು. ನೂರು ತಾಣಗಳಲ್ಲಿ ಯಾವುದಾದರೊಂದರಲ್ಲಿ ಪ್ರತಿ ನಿತ್ಯ ಅದಕ್ಕೆ ಗಾಯವಾಗುತ್ತಿರುವದು. ಗಾಯದ ಮೇಲೆ ಗಾಯ; ಬರೆಯ ಮೇಲೆ ಬರೆ; ಮೋಹಿಸಿದವನ ಮನಸ್ಸು ದೈವವು ಎಚ್ಚ ನೂರು ಬಾಣಗಳು ತಾಗುವ ಗುರಿಹಲಗೆಯಾಗುವದು ಅದಕ್ಕೆ ಶಾಂತಿಯೇ ಇಲ್ಲ.

ಆದಕಾರಣ,–ಓ ಗೆಳೆಯ ! ನೇವರಿಸುವ ಬಳ್ಳಿಯಾಗಬೇಡ. ಸಾವರಿಸಿಕೊಂಡು ಸ್ವಯಂಪೂರ್ಣವಾಗಿ ನಿಲ್ಲುವ ಮರವಾಗು. ಸೃಷ್ಟಿಗೆ ಮಾರುಹೋಗಬೇಡ. ನಿನ್ನೊಳಗಿನಲ್ಲಿಯೇ ಇರುವ ಶಾಂತಿದಾಯಕ ಸೃಷ್ಟಿಯನ್ನು ಕಂಡುಕೊಳ್ಳು. The Kingdom of God is within you. ದೇವರ ರಾಜ್ಯ-ಸಂಪೂರ್ಣ ಸಂತೃಪ್ತಿಯನ್ನು ಕೊಡುವ ರಾಜ್ಯ–ನಿನ್ನೊಳಗೇ ಇದೆ. ನೀನು ಅದರ ಪ್ರಭುವಾಗಬಲ್ಲೆ, ಅಲ್ಲಿ ಪ್ರವೇಶವನ್ನು ದೊರಕಿಸು; ಹೊರಗಣ ಸೃಷ್ಟಿಯೆಲ್ಲ ಅಲ್ಲಿ ಸಾರಭೂತವಾಗಿ ನಿನಗೆ ದೊರೆಯುವದು. ನಿನಗೆ ಪ್ರಿಯವಾದ ವಸ್ತುಗಳೆಲ್ಲ ಅಲ್ಲಿ ಸನಾತನವಾಗಿ ಚಿರಂತನವಾಗಿ ನಿನಗೆ ದೊರೆಯುವವು. ಸೃಷ್ಟಿಯ ರಹಸ್ಯವನ್ನೆಲ್ಲ ಅಲ್ಲಿ ನೀನು ತಿಳಿಯುವಿ. ಮೋಹವು ಬಿಸಿಲುಗುದುರೆಯ ಬೆನ್ನುಹತ್ತಿದೆ. ಬ್ರಹ್ಮಜಿಜ್ಞಾಸೆಯೆಂಬ ಪುಂಡರೀಕಾಶ್ವವನ್ನೇರಿ ನೀನು ಸಚ್ಚಿದಾನಂದದ ನಿರಾಮಯತೆಯನ್ನು ಮುಟ್ಟಬಲ್ಲೆ; ಮೋಹವು ಬರಿ ದಾಹ. ಈ ಜಿಜ್ಞಾಸೆಯೇ ಸತ್ಯಸೃಷ್ಟಿಯ ಸೋಪಾನ.

ಮದವು ಪರಿ ಬಂದ ಕಣ್ಣು, ಸೊಕ್ಕಿದ ಆನೆ. ತನ್ನನ್ನುಳಿದು ಅದಕ್ಕೆ ಮತ್ತೇನೂ ಕಾಣುವದಿಲ್ಲ. ತಲೆಯಲ್ಲಿಯ ಮುತ್ತನ್ನೆಲ್ಲ ಸಿಂಹವು ಕೆದರುವದೆಂದು ಅದಕ್ಕೆ ಗೊತ್ತಿಲ್ಲ. ಮದದಲ್ಲಿ ಸೂಕ್ಷ್ಮ ಪ್ರಕಾರಗಳೂ ಉಂಟು. ತಾನು ಸಾತ್ವಿಕನೆಂಬ ಅಹಂಕಾರ, ವಿನಯದಿಂದ ನಡೆದುಕೊಂಡರೂ ಆ ವಿನಯದಲ್ಲಿ ಸೂಚಿತವಾಗುವ—ತಾನು ಅನ್ಯರಿಗಿಂತ ಸಾರತಃ ದೊಡ್ಡವನೆಂಬ—ಭಾವ,—ತನ್ನ ಗುಣಗಳ ಬಗ್ಗೆ ಇರುವ ಸ್ವಗೌರವ, ತಾನು ದೇವಕೃಪೆಗೆ ಪಾತ್ರನಾದವನೆಂಬ ಅನಿಸಿಕ, ದೇವಚಿತ್ತಕ್ಕೆ ತಾನು ಪ್ರಿಯನಾದ

ವನೆಂಬ ಸ್ಫುರಣೆ— ಇವೆಲ್ಲ ಮದದ ಸೂಕ್ಷ್ಮ ಪ್ರಕಾರಗಳು. ಚೈತ್ಯಪುರು-
ಷನ ಸುತ್ತಲೂ ಇವು ಮಂಜಿನ ಪರದೆಗಳನ್ನು ಬಿಡುತ್ತವೆ. ಚಿಮ್ಮಿ ಬರುವ
ಸ್ಫೂರ್ತಿಯು ಬುಗ್ಗೆಯೆಡೆಗೆ ಇವು ಹರಳನ್ನು ಎರಚುತ್ತವೆ. ಒಳಗಿನ
ಜ್ಯೋತಿಯ ಸುತ್ತಲೂ ಇವು ಕಪ್ಪುಗಾಜನ್ನು ಕೂಡಿಸುತ್ತವೆ. ಹೀಗೆ ಮಂಜು-
ಗವಿದ ಕಣ್ಣಿಗೆ ಸೃಷ್ಟಿಯು ಇಲ್ಲವೆ ಅನ್ಯ ವ್ಯಕ್ತಿಗಳ ಮಹತ್ತು ಕಾಣುವದಿಲ್ಲ.
ಅದರ-ಇಲ್ಲವೆ ಅವರ-ದೈವಾಂಶವು ಕ್ರಮೇಣ ಮರೆಯಾಗುತ್ತದೆ ಇದಕ್ಕೆ
ಉಪಾಯವೆಂದರೆ ಒಂದೇ ಒಂದು,— ಸಮರ್ಪಣ ಭಾವ. ಮಾಡಿದ್ದನ್ನು
ಚಿಂತಿಸಿದ್ದನ್ನು, ಎಲ್ಲವನ್ನೂ ದೇವನಿಗೆ ಅರ್ಪಿಸಬೇಕು. ನನ್ನದೆಂಬುದು
ಯಾವುದೂ ಇಲ್ಲ.—ದೈವಚಿತ್ತವೇ ಅದನ್ನು ಇತ್ತಿತು ಇಲ್ಲವೆ ಮಾಡಿಸಿತು.
ಈ ಭಾವನೆಯು ಸಾಧ್ಯವಾಗದಿದ್ದರೆ ಶ್ರೀ. ಅರವಿಂದರು ಹೇಳಿದಂತೆ,—ಎಲ್ಲ-
ವನ್ನೂ ಪ್ರತಿನಿತ್ಯ ದೇವನಿಗೆ ಸಮರ್ಪಿಸಬೇಕು. ಭಕ್ತನ ಈ ಭಾವ, ಸೇವ-
ಕನ ಈ ಸೇವಾಬುದ್ಧಿ ಅವಶ್ಯವಾಗಿ ಬೇಕು.

ಸದಭಿಮಾನವು ಮದವೆಂದು ಹೇಳಲಾಗುವದಿಲ್ಲ. ದೈನ್ಯವು ಒಂದು
ಬಗೆಯ ಅಸಮರ್ಥತೆಯೇ ಸರಿ. ನಿಸ್ಪೃಹನಿಗೆ ಜಗತ್ತು ತೃಣದಂತಿದ್ದರೆ
ದೀನನಿಗೆ ತೃಣವೂ ಪರ್ವತಪ್ರಾಯವಾಗಿರುತ್ತದೆ. ತನ್ನಲ್ಲಿದ್ದ ಮಾನವತೆಯ-
ಅದರಲ್ಲಿ ಅಡಕವಾಗಿದ್ದ ದೈವಿಕತೆಯ ಗೌರವವನ್ನು ಕಾಯದ ವ್ಯಕ್ತಿಯು
ಶಕ್ತಿಹೀನ. ಮೋಹದ ಪಾರತಂತ್ರ್ಯದಿಂದ ಬಿಡಿಸಿಕೊಳ್ಳುವಂತೆ ಮಾನವನು
ದೈನ್ಯದ ಪರಾಶ್ರಯತೆಯಿಂದ ಸಹ ತನ್ನನ್ನು ಬಿಡಿಸಿಕೊಳ್ಳಬೇಕು. ತನ್ನ
ಆಶ್ರಯವನ್ನು ತನ್ನಲ್ಲಿಯೇ ಕಂಡುಕೊಳ್ಳಬೇಕು.

ದೈನ್ಯದ ಬುಡದಲ್ಲಿ ಭಯವಿದೆ. ಭಯವೇ ನರನನ್ನು ದೀನನನ್ನಾಗಿ
ಮಾಡುತ್ತದೆ. ಭಯವೆಂದರೆ ದಟ್ಟಡವಿಯಲ್ಲಿ ದಾರಿ ತಪ್ಪಿದ ಗೋವು,
ಮುಚ್ಚಿದ ಕಣ್ಣುಗಳು, ಹಾರುತ್ತಿರುವ ಎದೆ, ಕತ್ತಲೆಯಲ್ಲಿ ಕಂಗೆಟ್ಟ ಶಿಶು.
ಚಕ್ರವರ್ತಿಯ ಎದುರಿಗೆ ನ್ಯಾಯಸ್ಥಾನದಲ್ಲಿ ನಡುಗುತ್ತ ನಿಂತ ಅಪರಾಧಿ.
ಬೇಟೆನಾಯಿ ಬೆನ್ನಟ್ಟಿದ ಮೊಲವೇ ಭಯ. ಭಯವು ಹುಟ್ಟುವದು
ಅಜ್ಞಾನದಿಂದ, ಪಾಪಶಂಕೆಯಿಂದ, ದೂಷಿತ ಹೃದಯದಿಂದ. ಜ್ಞಾನವು
ಹೆಚ್ಚಿದಂತೆ ಭಯವು ಕಡಿಮೆಯಾಗುವದು. ಹಳ್ಳಿಗನು ವಿಮಾನದಲ್ಲಿ
ಕೂಡಲು ಸಹ ಅಂಜುತ್ತಾನೆ. ಆದರೆ ಕೆಲವು ತಿಂಗಳು ತರಬೇತಿನ ಶಿಕ್ಷಣ

ಪಡೆದ ನಂತರ ಅವನೇ ವಿವಾಹವನ್ನು ನಡೆಯಿಸಬಹುದು. ಪ್ರತಿಯೊಬ್ಬ ಸಂಸಾರಿಗನು ದೈವದ ಅಡತಿಯಂಗಡಿಯಲ್ಲಿ ತನ್ನ ಐಶ್ವರ್ಯವನ್ನೂ ಮಡದಿ ಮಕ್ಕಳನ್ನೂ ಅಡವಿಟ್ಟಂತೆ ಬಗೆದು ನಡೆಯುತ್ತಾನೆ. ತಪ್ಪಡಿಯಿಟ್ಟವನಿಗೆ ನೋಡಿದಲ್ಲೆಲ್ಲ ದರಿ-ಕಂದರಗಳು ಕಾಣುತ್ತವೆ. ಕಳ್ಳನಿಗೆ ಪ್ರತಿಯೊಂದು ಕಂಟಿಯ ಹಿಂದೆ ಪೋಲೀಸನಿದ್ದಂತೆ ಭಾಸವಾಗುತ್ತದೆ.

ಅಂಜುವದು ಏತಕ್ಕೋಸ್ಕರ? ನಮ್ಮ ಸುಖ-ಸಾಧನೆಗಳು ಕಳೆಯು ಬಹುದೆಂದು, ನಮಗೆ ಪ್ರಿಯರಾದವರು ಅಗಲಬಹುದೆಂದು, ನಾವು ತಾಳಿ ಕೊಳ್ಳಲು ಅಸಾಧ್ಯವಾದ ಯಾತನೆಗಳು ನಮ್ಮನ್ನು ಮುತ್ತಬಹುದೆಂದು, ಮರಣವು ಬಂದು ನುಂಗಬಹುದೆಂದು, ನಮ್ಮ ಮನಃಶಾಂತಿ ಇಲ್ಲವೆ ಸಾಧ ನೆಯು ಕಳೆದು ನಾವು ಚ್ಯುತರಾಗಬಹುದೆಂದು, ಗೊತ್ತಿದ್ದು ಇಲ್ಲವೆ ಗೊತ್ತಿ ಲ್ಲದೆ ಗೆಯ್ದ ಅಪರಾಧಕ್ಕೆ ಶಿಕ್ಷೆ ಸಿಗಬಹುದೆಂದು. ಭಯವು ಒಂದರ್ಥದಿಂದ ಧರ್ಮದ ಮೂಲವೇನೋ ನಿಜ,— ದೇವರನ್ನು ಅದು ಸಂಬಂಧಿಸಿದಾಗ. ಆದರೆ ಇನ್ನೊಂದು ದೃಷ್ಟಿಯಿಂದ ಅದು ಧರ್ಮಹೀನತೆಯು ತುತ್ತ ತುದಿ ಯಾಗಿದೆ. ಸಾಧನೆಯ ಮಾರ್ಗದಲ್ಲಿ ಸಾಧಕನೆದುರಿಗೆ ನಿಂತ ಬ್ರಹ್ಮರಾಕ್ಷ ಸನೇ ಭಯ.

ಇದರೊಳಗಿಂದ ಪಾರಾಗುವ ಬಗೆ ಯಾವುದು? ಗೆಯ್ದ ಅಪರಾಧಕ್ಕೆ ಅದು ಬುದ್ಧಿಪೂರ್ವಕವಾದುದಿರಲಿ ಇಲ್ಲದಿರಲಿ–ದೊರೆಯುವ ಶಿಕ್ಷೆಯನ್ನು ಸ್ವೀಕರಿಸಲು ನಾವು ಸದಾ ಸಿದ್ಧರಾಗಿರಬೇಕು. ಗೊತ್ತಿಲ್ಲದೆ ಆದುದಿದ್ದರೆ ಹೆಚ್ಚಿನ ಜ್ಞಾನಕ್ಕಾಗಿ ಭಗವಂತನನ್ನು ಪ್ರಾರ್ಥಿಸಿ ಅದನ್ನು ಸ್ವೀಕರಿಸಬೇಕು. 'ಒಂದು ಕ್ಷಣಾ ಕಂಡ ತಪ್ಪಿಗೆ ಎಂದಿನತನಕ ಕೊರಗೋದು?' ಎಂಬ ಪ್ರಶ್ನೆಗೆ ಇನ್ನೊಮ್ಮೆ ಅಂಥ ತಪ್ಪು ಆಗದೆ ಇದ್ದು ಅಂಥ ವೃತ್ತಿಯನ್ನು ತಿದ್ದಿಕೊಳ್ಳುವ ತನಕ ಎಂಬುದೇ ಉತ್ತರ. ಕೇಳದೆ ಕಬ್ಬನ್ನು ತಂದ ರಾಮದಾಸರಂತೆ ತೋಟಿಗನ ಏಟಿಗೆ ಮೈ ಮಣಿಸಬೇಕು.

ಸುಖಸಾಧನೆ, ಪ್ರಿಯವಸ್ತು ಇಲ್ಲವೆ ವ್ಯಕ್ತಿ, ಇವು ಕಳೆಯಬಹುದೆಂಬ ಭಯದ ಬುಡದಲ್ಲಿ ಮೋಹವಿದೆ. ಜಗತ್ತನ್ನು ಯಾರು ತಮ್ಮ ಅಂಕಿತದಲ್ಲಿ ಇಟ್ಟುಕೊಳ್ಳಬಹುದು? ನಿಯತಿಯನ್ನು ಯಾರು ತಡೆಯಬಹುದು? ತೆಕ್ಕೆ ಬಿದ್ದರೆ ಉಕ್ಕಿಬರುವ ವಾರಿಧಿಯು ನಮ್ಮನ್ನು ಉಳಿಸೀತೇ? ಮುಷ್ಟಿಯನ್ನು

ಬಿಗಿ ಹಿಡಿದರೆ ಅದರೊಳಗೆ ಸೆರೆ ಹಿಡಿದ ಬುರುಗು ಅದೃಶ್ಯವಾಗದೆ ಇದ್ದೀತೆ? ಸೂರ್ಯಾಸ್ತದಲ್ಲಿ ಸೂರ್ಯಕಿರಣಗಳನ್ನು ಯಾರು ಒಂದು ನಿಮಿಷವಾದರೂ ಹಿಡಿದು ನಿಲ್ಲಿಸಬಲ್ಲರು? ಆದಕಾರಣ ಓ ಗೆಳೆಯ! ಬಂದ ಅಗಲಿಕೆ. ಸೋಲು, ಹಾನಿ, ಎಲ್ಲವನ್ನೂ ಸ್ವೀಕರಿಸು. ಅನುದ್ವಿಗ್ನನಾಗಿ ಬರಮಾಡಿಕೋ. ದೈವ ಚಿತ್ತ ಫಲೋನ್ಮುಖತೆಯ ವೇಳೆಗೆ ಮಾತ್ರ ತಿಳಿದೀತು. ಹಣ್ಣಿಗೆ ಬಿಟ್ಟ ಕಾಯಿಯನ್ನು ಈ ಮಾರ್ಗದಿಂದ ಹೀಚಿನಲ್ಲಿ ತಿಳಿಯಲಾಗುವದಿಲ್ಲ. ಯಾರಿಗೆ ಗೊತ್ತು! ಅಪಜಯವೇ ಜಯದ ಆಧಾರಸ್ತಂಭವಾಗಬಹುದು. ಹಾನಿಯೇ ಜ್ಞಾನಕ್ಕೆ ದಾರಿ ಮಾಡಿಕೊಡಬಹುದು ಅಗಲಿಕೆಯಿಂದಲೇ ಸೂರ್ಯನನ್ನು ಮರೆಮಾಡುವ ಸುದರ್ಶನ ಒದಿಗೆ ಸರಿಯಬಹುದು. ನೀನು ಅರಸುವದು ಸುದರ್ಶನನನ್ನಲ್ಲ;–ಸೂರ್ಯನನ್ನು. ಪ್ರೀತಿಯನ್ನಲ್ಲ;–ಸಚ್ಚಿದಾನಂದವನ್ನು. ಪ್ರೀತಿಯು ಅವಶ್ಯವಿದ್ದಮಟ್ಟಿಗೆ ಒಡೆಯನು ಕೊಟ್ಟ ಬುತ್ತಿಗಂಟು. ಅದನ್ನು ತಿಂದು ತೇಗಿ ಅದು ಮುಗಿದಾಗ,– ಇನ್ನು ಅದು ಬೇಕಿಲ್ಲವೆಂದು ನಿಶ್ಚಿಂತನಾಗಿರು.

ಮನಃಶಾಂತಿ ಹೋಗಿ ಸಾಧನೆಯಿಂದ ಚ್ಯುತರಾಗಬಹುದೆಂಬ ಭಯವೂ ಧರ್ಮಹೀನತೆಯ ಲಕ್ಷಣ. ಅದು ಹೇಗೆ ಹೋಗಬಲ್ಲದು? ಹೋದರೆ ಹೋಗಲಿ. ಎಂಥ ಕತ್ತಲೆಯಲ್ಲಿಯೂ ನಂಬಿದ ದೈವಚರಣವನ್ನು ಬಿಡಬೇಡ. ಹೋದುದು ಇಮ್ಮಡಿಯಾಗಿ ಬರುವದು. ಇಂಥ ಹಿಂಗತಿ ಮುಂಗತಿಯಿಂದ ಮಾತ್ರ ಜೀವನವು ಪ್ರಗತಿಯ ಪಥ ಹಿಡಿಯುವದು.

**ಮರಣ!** ಅದಕ್ಕೆ ಭಯಪಡಬೇಡ ಎಲ್ಲ ಸಂಸಾರ ನಿನ್ನದೆಂದಾಗ,– ಆ ಹೊಣೆಯಿಂದ ನೀನು ಹಲುಬುತ್ತೀ. ಆದರೆ ಅದು ದೇವರದೆನ್ನು. ನಿನ್ನ ಶಕ್ತಿ-ವಿವೇಕಗಳಿಗೆ ಉಚಿತವಾದುದನ್ನು ಮಾತ್ರ ನೀನು ಮಾಡಬಲ್ಲೆ; ಮಾಡಬೇಕು. ಹೆಚ್ಚಿನದೇನು ಸಾಧ್ಯ? ಮರಣಕ್ಕಾಗಿ ನೀನು ಭಯಪಡುವದು,– ನಿನಗೆ ಪ್ರಿಯರಾದವರ ಹಿತವನ್ನು ನೆನಿಸಿ. ಅವರವರ ದೈವ ಅವರಿಗೆ. ಎಲ್ಲರ ದೈವ ದೇವನ ಕೈಯಲ್ಲಿ. ಅದನ್ನು ತಿಳಿದು ನಿಶ್ಚಿಂತನಾಗಿರು.

ಸಹಿಸಲಸಾಧ್ಯವಾದ ಯಮಯಾತನೆಗೆ ದೇಹವು ಕಂಪಿಸುವದು. ಮಹಾರೋಗಿಯನ್ನು ನೋಡಿ ಹೃದ್ರೋಗವು ಬರುವಂತಾಗುವದು. ಕ್ಷಯಸ್ಥನನ್ನು ನೋಡಿ ನಮ್ಮ ಧೈರ್ಯ ಕ್ಷಯಿಸುವದು. ಯೇಸುವೂ ದೇಹ

ಯಾತನೆಯನ್ನು ಸಹಿಸಲು ಒಂದು ನಿಮಿಷ ಕಂಗೆಟ್ಟು. ಆದರೆ ದೇಹಯಾತನೆಯು ಒಂದು ಮಟ್ಟವನ್ನು ಮೀರಿದ ಮೇಲೆ ಅದರ ಸ್ಮೃತಿಯೇ ಉಳಿಯುವದಿಲ್ಲವೆಂಬುದನ್ನು ನೆನಪಿಡು. ಬರಬಹುದಾದ ಯಾತನೆಯನ್ನು ಸಹಿಸಲು ಬೇಕಾದ ಸ್ಥೈರ್ಯ-ಧೈರ್ಯಗಳನ್ನು ಕರುಣಿಸಲು ದೇವನಲ್ಲಿ ಮೊರೆಹೋಗು.

ಮನೋರೋಗ ಹೃದ್ರೋಗಗಳು ಹುಚ್ಚು ಹಿಡಿಸುವಂತೆ ಮಳಲಿನ ಬಯಲಿನಲ್ಲಿ ನಿನ್ನನ್ನು ಓಡಿಸಬಹುದು. ಓಡು. ಆದರೆ ಆ ರೋಗಗಳನ್ನು ಹಚ್ಚಿಕೊಳ್ಳಬೇಡ. ಜೀವನವು ನೀರಸವಾದಲ್ಲಿ,-ಅಮೃತಕ್ಕಾಗಿ ಜಿನುಗುವ ಚಾತಕವಾಗು. ಎಲ್ಲ ವಿದ್ಯೆಗಳಲ್ಲಿ ಅಧ್ಯಾತ್ಮವೇ ಶ್ರೇಷ್ಠವೆಂದು ತಿಳಿದ ನೀನು ಅದನ್ನು ಹಿಂಬಾಲಿಸು. ಉಳಿದ ರಸಕ್ಕೆ ತಪ್ಪದವಿದ್ದಲ್ಲಿ,-ಹಂಸಕ್ಷೀರ ನ್ಯಾಯದಂತೆ ವಿವಿಧ ರಸಗಳೊಳಗಿಂದ ಅಮೃತವನ್ನಷ್ಟೇ ಗ್ರಹಿಸುವ ಜೀವಹಂಸವಾಗು.

ಪ್ರಾಣಮಯತೆಯು ಒಂದು ಉಚ್ಚ ಪ್ರಕಾರವೂ ಇದೆ. ಸ್ನೇಹ, ಪ್ರೀತಿ, ದೇಶಭಕ್ತಿ-ಇವುಗಳಿಂದ ಒಂದು ವಿಶೇಷ ಅನುಭವವನ್ನು ಪಡೆದು ವ್ಯಕ್ತಿಯು ಅವುಗಳಿಗೆ ತಿಳಿಯದೆ ಅಂಟಿಕೊಳ್ಳುತ್ತಾನೆ. ಈ ಆಸಕ್ತಿಯು ಸಾತ್ವಿಕವಾಗಿದ್ದರೂ ಅದು ಪ್ರಗತಿಗೆ ಆತಂಕವಾಗುವದರಲ್ಲಿ ಸಂಶಯವಿಲ್ಲ. ಈ ಎಲ್ಲ ವೃತ್ತಿಗಳು ಆಯುಧಶಾಲೆಯಲ್ಲಿಯ ಆಯುಧಗಳಾಗಬೇಕು; ವ್ಯಕ್ತಿಯ ಅವಯವಗಳಾಗಬಾರದು. ಅಂದರೆ ವ್ಯಕ್ತಿಯ ಚೇತನೆಯ ಅಭಿವ್ಯಕ್ತಿಗೆ ಇರುವ ಬೇರೆ ಬೇರೆ ದಿಶೆಗಳು ಇವು. ಈ ಅಭಿವ್ಯಕ್ತಿಯಿರುವದು ಚೇತನದ ವಿಕಾಸಕ್ಕಾಗಿ. ಈ ಗರಡಿಮನೆಗಳಲ್ಲಿ ಸಾಧಕನು ಸಿದ್ಧನಾಗಬೇಕಾಗಿದೆಯೇ ಹೊರತು,- ಅವು ಅವನ ನಿಕೇತನವಲ್ಲ. ನಿಕೇತನವೊಂದೇ,- ಪರಾ ಪ್ರಕೃತಿಯ ಗರ್ಭಗುಡಿ.

# (೧೨) ಮನಸ್ಸು

ಮನೋಮಯತೆಯ ಸಮಸ್ಯೆಗಳು ಬೇರೆಯಾಗಿವೆ ಮನವು ಮಂಗನಂತೆ. ಆತ್ಮವು ಈ ಮಂಗನ ಕೈಯಲ್ಲಿ ಕೊಟ್ಟ ಮಾಣಿಕದಂತೆ ಮಂಗನನ್ನು ಸಾಧುಗೊಳಿಸಿ ಅದರ ಕೈಯಿಂದ ಆ ಮಾಣಿಕವನ್ನು ಬಿಡಿಸಿಕೊಳ್ಳುವದೇ ಚೈತ್ಯಪುರುಷನು ಮಾಡಬೇಕಾದ ಕಾರ್ಯವಾಗಿದೆ.

ಇಂದ್ರಿಯಗಮ್ಯವಾದ ಅನುಭವವನ್ನು ಮನಸ್ಸು ಬುದ್ಧಿಗೆ ಒಯ್ದು ಮುಟ್ಟಿಸುತ್ತದೆ. ಬುದ್ಧಿಯು ಸ್ಮರಣಚಿತ್ರಗಳನ್ನು ಚಿತ್ತದಲ್ಲಿ ಸಂಗ್ರಹಿಸಿಟ್ಟು ಬೇಕಾದಾಗ ಅವುಗಳನ್ನು ಚಿತ್ತದಿಂದ ಅದು ಬುದ್ಧಿಗೆ ರವಾನಿಸುತ್ತದೆ. ಮನಸ್ಸು ಅಂಚೆಯವ, ಓಲೆಕಾರ. ಇದಕ್ಕೂ ಹೆಚ್ಚಿನ ಅಧಿಕಾರವನ್ನು ಮನಸ್ಸು ಪಡೆದುಕೊಂಡಿರಬಾರದು. ಅಂದರೆ ಅದು ನಮ್ಮ ನಿರ್ಣಯಶಕ್ತಿಯನ್ನು ಮುಸುಕಿರಬಾರದು. ಸಲ್ಲದ ಮಾಟಕ್ಕೆ ನಮ್ಮನ್ನು ಪ್ರವೃತ್ತರನ್ನಾಗಿ ಮಾಡಬಾರದು.

ಮನಸ್ಸನ್ನು ಶಾಂತವಾಗಿಸಿರಬೇಕು. ಗೊಂದಲವು ಕಡಿಮೆಯಾದಾಗ ಮಾತ್ರ ಶ್ರೋತೃಮಂದಿರದಲ್ಲಿ ಭಾಷಣವು ಕೇಳಬಲ್ಲದು. ಹೊರಗಿನ ನಗಾರಿಯ ಬಾಜಣೆ ನಿಂತಾಗ ಗರ್ಭಗುಡಿಯ ಗಂಟೆಯ ನಾದ ಕಿವಿಯನ್ನು ತಣಿಸೀತು. ಮನಸ್ಸಿನ ಚಲಚ್ಚಿತ್ರ ನಿಂತಾಗ ಅಂತಶ್ಚಕ್ಷುವಿನೆದುರಿಗಿದ್ದ ಅಂತಃಪಟದ ಮೇಲೆ ಆಂತರಿಕ ಸೃಷ್ಟಿಯ ರಹಸ್ಯ ಮೂಡೀತು.

ಸ್ಮರಣಶಕ್ತಿಯು ಚಿತ್ತವನ್ನು ವರ್ಡ್ಸ್‌ವರ್ಥ್ ಹೇಳುವಂತೆ ಎಲ್ಲ ಸುಂದರ ರೂಪಗಳ ಅರಮನೆಯನ್ನಾಗಿ ಮಾಡಲಿ. ಅಲ್ಲಿ ಅಸುಭಗವಾದ್ದುದೇನೂ ಬೇಡ. ಕಲ್ಪಕತೆಯು ಸುಂದರ ವಸ್ತುಗಳ ಸಮನ್ವಯವನ್ನು ಸಾಧಿಸಲಿ. ಅದರ ಕ್ರಿಯೆ ಕೃತ್ರಿಮ ಲೀಲೆ, ಉನ್ಮಾದ ಇಲ್ಲವೆ ಬರಿ ಒಂದು ಬಣ್ಣದಾಟವಾಗಿರಬಾರದು. ಬುದ್ಧಿಯು ತನ್ನ ತರ್ಕದಲ್ಲಿಯೇ ಲೀನವಾಗಿ ಸತ್ಯವನ್ನು ಮರೆಯದಿರಲಿ. ವಿಂಗಡಿಕೆಯಿಂದ ನಿರ್ಣಯಕ್ಕೆ ಬರುವ ಅದರ ರೀತಿ ವಿಂಗಡಿಕೆಯನ್ನು ಹದಗೇಡಿತನಕ್ಕೆ ಒಯ್ದು ಮುಟ್ಟಿಸದಿರಲಿ.

ಚಿತ್ತದಲ್ಲಿಯ ತರಂಗಗಳು ಶ್ರೀ. ಅರವಿಂದರು ಹೇಳಿದಂತೆ ಸಮುದ್ರದ ತೆರೆಗಳ ರೀತಿಯಲ್ಲಿ,– ಚಿತ್ತದಲ್ಲಿಯೇ ಲೀನವಾಗಲಿ. ಭಾವನೆಯು ಇಲ್ಲವೆ ತರ್ಕದ ಪ್ರೇರಣೆಯಿಂದ ಕೃತಿಗಿಳಿಯಬಾರದು. ಶಕ್ತಿಯ (Will) ಆಜ್ಞೆಯನ್ನನುಸರಿಸಿ ಮಾತ್ರ ಕಾರ್ಯಪ್ರವೃತ್ತರಾಗಬೇಕು. ವ್ಯಕ್ತಿಗಿದ್ದ ಈ ಎಲ್ಲ ಸೂಕ್ಷ್ಮೇಂದ್ರಿಯಗಳ ರೀತಿಯಲ್ಲಿ **ಧರ್ಮಸಂಕರವಾಗದಿರಲಿ**. ದಿವ್ಯಾದೇಶಗಳನ್ನು ಚಿತ್ತದ್ರವ್ಯದೊಳಗಿಂದ ಕಂಡುಕೊಳ್ಳದೆ ಶುದ್ಧ ಸ್ವರೂಪದಲ್ಲಿ ಗ್ರಹಿಸುವ ಪ್ರಜ್ಞೆ ಬೆಳೆಯಲಿ.

ಹೀಗೆ ನಡೆದಾಗ ಮಾತ್ರ ವ್ಯಕ್ತಿತ್ವದ ಅನುಮಂತ ಇಲ್ಲವೆ ಈಶ್ವರನಾದ ಜೀವನು ಕಣ್ಣು ತೆರೆದಾನು. ಮೇಲಿನ ಬುದ್ಧಿಯು ತೆರೆದೀತು. ಪ್ರಕಾಶಿತ ಬುದ್ಧಿಯು ಬೆಳಗೀತು. ಅಂತಃಪ್ರೇರಣೆಯು ಸ್ಫುಟವಾದೀತು. ಉನ್ಮನೋಮಯತೆಯ (Over Mind) ಅದ್ಭುತವು ಸಮೀಪಿಸೀತು. ಪರಾಬುದ್ಧಿಯ ಏಕಮೇವತೆಯ ರಹಸ್ಯಕ್ಕೆ ದಾರಿಯಾದೀತು. ಆಗ ನಾವು ಪರಾಪ್ರಕೃತಿಯ ಸನತ್ಕುಮಾರರಾದೇವು.

# (೧೩) ಮನೆ

ಮನೆಯು ಒಂದು ಪ್ರಯೋಗಶಾಲೆ, ವಿರಾಮಧಾಮ. ನಿದ್ರಾವಶವಾದ ಕೂಸಿಗೆ ಹಾಸಿದ ಹಾಸಿಗೆ ಅದು; ಅಂಬೆಗಾಲಿಕ್ಕುವ ಮಗುವಿಗಿದ್ದ ಪಡಸಾಲೆ. ಮನೆಯು ರಣಾಂಗಣವಾಗಬಾರದು; ಲೀಲಾಂಗಣವಾಗಬೇಕು. ಕುರುಕ್ಷೇತ್ರವಾಗಿರಬಾರದು; ಧರ್ಮಕ್ಷೇತ್ರವಾಗಬೇಕು. ದೇವರ ದಿವ್ಯ ಮಂದಿರವನ್ನು ಕಟ್ಟಲು ಬೇಕಾದ ಆತ್ಮದ್ರವ್ಯವನ್ನು ಅಗಿಯಲು ಆಸ್ಪದ ಕೊಡುವ ಗಣಿಯದು ಮನೆ.

ಮನೆಗೊಂದು ಸಿಸ್ತು ಬೇಕು. ನಿಯಮಿತತೆಯಿಲ್ಲದ ಮನೆ ಮನೆಯಲ್ಲ; ದೆವ್ವನ ಮನೆ. ಮಾತು ಮೆಲ್ಲಗೆ, ಕೃತಿ ಹಿತವಾಗಿ. ಮನೆಯವರೊಡನೆ ಉಲ್ಲಾಸ, ಅತಿಥಿಗಳೊಡನೆ ಆದರ,–ಹೀಗೆ ಯಾವ ಮನೆಯಲ್ಲಿರುವದೋ ಅದು ಬರಿ ಮನೆಯಲ್ಲ; ದೇವಾಯತನ.

ಮನೆಗೊಂದು ಮಹಡಿ ಬೇಕು. ಆ ಮಹಡಿಯಲ್ಲಿ ಒಂದು ದೇವಾಗಾರವಿರಬೇಕು. ಮನೆಯವರಿಗೆಲ್ಲ ಅದೊಂದು ಶಕ್ತಿಯ ಕೇಂದ್ರ. ಅಲ್ಲಿ ಪಡೆದ ಶಕ್ತಿಯನ್ನು ಮನೆಯವರು ಕೆಳಗೂ ಹೊರಗೂ ಕೂಡಿಯೇ ಉಪಯೋಗಿಸಬಹುದು.

ಮನೆಯವರೊಡನೆ ಕೂಡಿ ನಡೆಯದವನು ಸಮಾಜದೊಡನೆ ಹೇಗೆ ಸಮರಸವಾಗಬಲ್ಲ? ಮನೆಯನ್ನು ಗೆಲ್ಲದೆ ಮಾರನ್ನು ಯಾರು ಗೆಲ್ಲಬಹುದು?

ಓ ಮನೆಯ ಯಜಮಾನ! ನಿನಗೆ ಮನೆಯನ್ನು ಏಕೆ ಕರುಣಿಸಿದೆ ಗೊತ್ತೋ? ನಿನ್ನ ಮಡದಿ-ಮಕ್ಕಳಿಂದ ನೀನು ಪಾಠ ಕಲಿಯಲೆಂದು. ನಿನ್ನಿಂದ ಅವರು ಕಲಿಯಲೆಂದು. ಇಂಥ ಒಂದು ಕಲಿತ–ಇಂಥವರಿಂದ ಮಾತ್ರ–ಅವಶ್ಯವೆಂದೇ ನೀವು ಕೂಡಿ ಒಂದು ಮನೆಯಾಗಿದ್ದೀರಿ! ಆಯತನವೆಂದರೆ ರಾಮಪಂಚಾಯತನ. ಇದನ್ನು ಮರೆಯದಿರು. ಮನೆಮುರುಕತನದಿಂದ ಮನೆಯು ನರಕವಾಗದಿರಲಿ. ಅದು ದೇವೇಂದ್ರನ ಸ್ವರ್ಗವೂ ಆಗದಿರಲಿ. ನವ್ಯಭವ್ಯ ಜೀವನದ ಪ್ರಯೋಗಶಾಲೆಯಾಗಲಿ ಮನೆ.

ಷಡ್ರಿಪುಗಳ ಅರಡಿಯು ಅಲ್ಲಿ ಸುಳಿಯದಿರಲಿ. ಆದರೆ ಮುಂದೋಟದ ಒಂದು ಮರದ ಮೇಲೆ ಕುಳಿತು ಸೌಂದರ್ಯದ ಕೋಕಿಲ ತನ್ನ ಶಾಂತ ಗಾನವನ್ನು ಮಾಡಲಿ. ಲೊಚ್ ಲೊಚ್ ಎಂದು ನುಡಿಯುವ ಲೋಭದ ಹಲ್ಲಿ ಅಲ್ಲಿ ಬೇಡ. ಕಾ-ಕಾ ಎಂದು ಕರೆಯುವ ಕಂಗಾಲು ಕಾಗೆತನ ಬೇಡ. ಹಗಲಿಗೆ ಹೆದರುವ ಗೂಗೆಯ ಜೋಗುಳವೂ ಬೇಡ. ಕಳ್ಳತನದಿಂದ ನುಸುಳುವ ಬೆಕ್ಕು ಅಚೆ ತೊಲಗಲಿ. ಬಂದವರ ಮೇಲೆ ವಿವೇಕಶೂನ್ಯವಾಗಿ ಏರಿ ಹೋಗುವ ನಾಯಿ ಅಲ್ಲಿ ಇಲ್ಲದಿರಲಿ.

ಹವಣಿನಲ್ಲಿದ್ದ ಸೌಂದರ್ಯ, ಇರಬೇಕಾದಷ್ಟು ಅಚ್ಚುಕಟ್ಟು, ಆಳತೆಯನ್ನರಿತ ಆತಿಥ್ಯ, ಅಳೆಯಲಾಗದಷ್ಟು ಪ್ರೇಮ, ಕಿವಿಯಲ್ಲುಸುರಿದ ತಿಳ್ದುಪಡೆ, ಕಣ್ಣಿನಲ್ಲಿ ತುಳುಕುವ ಸಮಾಧಾನ, ಸ್ವಾಗತದ ತೋರಣ, ವಿಮಲ ಮನೋಗತದ ಓರಣ,- ಹೀಗೆ ಶುದ್ಧಾಂತಃಕರಣದ ಕನ್ನಡಿ-ಪಡಿಗನ್ನಡಿಗಳ ಮಂದಿರವಾಗಿರಲಿ ಮನೆ. ಪರಾಪ್ರಕೃತಿಗೆ ಪ್ರಕೃತಿಯ ರೂಪವನ್ನೂ ಪ್ರಕೃತಿಗೆ ಪರಾಪ್ರಕೃತಿಯ ದೈವಿಕತೆಯನ್ನೂ ಪ್ರತಿನಿತ್ಯ ಕೊಡುವ ಪರಿವರ್ತನ ನಿಕೇತನವಾಗಲಿ. ಬ್ರಹ್ಮರಹಸ್ಯವನ್ನರಿತ ತಾತ, ಪ್ರೀತಿ-ತಾಳ್ಮೆಗಳಿಂದ ಮನೆಯ ನಂದಾದೀಪವಾದ ತಾಯಿ, ದೈವಿಕತೆಯ ಕೈಗಂಬವಾದ ತಂದೆ, ಸಾಹಸದ ಮುಮ್ಮೊನೆಯಾದ ಮಕ್ಕಳು,- ಹೀಗೆ ಮನೆ ಮನೆಗೆ ನವೀನ ಸೃಷ್ಟಿಯಾಗಲಿ. ಕೈದೋಟದಲ್ಲಿಯ ಗುಲಾಬಿಯಂತೆ ಅಲ್ಲಿಯ ಮನ-ಮುಖವೆಲ್ಲ ಅರಳಿ ತನಿಗಂಪನ್ನು ಬೀರಲಿ.

# (೧೪) ಉದರ ನಿರ್ವಾಹ

ಬೆಮರದಿ ಬವರದಲ್ಲಿ ಜಯವಿಲ್ಲ. ಹಾವು ಹೊಟ್ಟೆ ಹೊಸೆಯುವ ಜಂತು. ಮಾನವನು ಹೊಟ್ಟೆ ತುಂಬಿಕೊಳ್ಳಲು ಅಲೆದಾಡುವ ಜಂತು. ಅವನ ಹೊಟ್ಟೆಯೇನು ಇಷ್ಟೊಂದು ಜಟಿಲ ಪ್ರಶ್ನೆ ಆಗಬೇಕಾದುದಿರಲಿಲ್ಲ. ಕಲ್ಪವೃಕ್ಷ ಕಾಮಧೇನುವಿನಂತೆ ಭೂಮಿತಾಯಿಯ ಅಖಂಡ ಐಶ್ವರ್ಯವು ನಮ್ಮೆದುರಿಗಿರಲು ಪ್ರಶ್ನೆ ಏಳುವದಕ್ಕಿಂತ ಮೊದಲು ಉತ್ತರವು ಸಿದ್ಧವಾಗಿಯೇ ಇದೆ. ಆದರೆ ಮನುಕುಲದ ಅಪೂರ್ಣತೆಯೇ ಈ ಪ್ರಶ್ನೆಯನ್ನು ಹುಟ್ಟಿಸಿ ಅದನ್ನು ಜಟಿಲವಾಗಿ ಮಾಡಿದೆ.

ಉದರ ನಿರ್ವಾಹವು ಒಂದು ಪ್ರಶ್ನೆ ಆಗಿದ್ದಲ್ಲಿ,—ಎಂಥ ಕೆಲಸವನ್ನು ಕೈಕೊಂಡು ಅದನ್ನು ನೀಗಿಸಬೇಕು ? ನಮಗೆ ಪ್ರಿಯವಾದ ಕೆಲಸವನ್ನು, ಸ್ವಾರ್ಥ-ಪರಾರ್ಥವನ್ನು ಕೂಡಿಯೇ ಸಾಧಿಸುವ ಹಟಕ್ಕೆ ಬಿದ್ದಲ್ಲಿ ಸುರಾಸುರ ವಿವಾಹವನ್ನು ಮಾಡಲು ಹೊರಟಂತಾದೀತು. ಧ್ಯೇಯದ ಮೇಲೆ ಹೊಟ್ಟೆಯು ಆದಷ್ಟು ಮಟ್ಟಿಗೆ ಅವಲಂಬಿಸಿರಬಾರದು. ಧ್ಯೇಯವು ಕೊಟ್ಟಷ್ಟರಲ್ಲಿಯೇ ಹೊಟ್ಟೆಯು ತೃಪ್ತಿಪಡುವದಾದರೆ ಅಡ್ಡಿ ಇಲ್ಲ. ಯಾವ ರೂಪದಲ್ಲಿಯೇ ಆಗಲಿ,- ಪ್ರಕೃತಿಗೆ ಉದರನಿರ್ವಾಹಕ್ಕಾಗಿ ನಾವು ಒಂದು ತೆರಿಗೆಯನ್ನು ತೆತ್ತಬೇಕಾಗಿದೆಯೆಂಬುದನ್ನು ಮರೆಯುಕೂಡದು. ಅದಕ್ಕೆ ಸಿದ್ಧರಾಗಿರಬೇಕು. ಆದಷ್ಟುಮಟ್ಟಿಗೆ ಪ್ರಿಯವಾದ ಕೆಲಸವನ್ನು ಕೈಕೊಂಡು ಆ ತೆರಿಗೆಯನ್ನು ತೆತ್ತಬೇಕು. ಧ್ಯೇಯಸಾಧನೆಗೆ ಅದರಲ್ಲಿ ಸಾಕಷ್ಟು ವಿರಾಮವಿರಬೇಕು.

ಒಬ್ಬ ಯಜಮಾನನ ಸೇವೆ, ಸಂಸ್ಥೆಯ ಸೇವೆ, ಸರಕಾರದ ಸೇವೆ,- ಹೀಗೆ ಸೇವೆಯೂ ತ್ರಿವಿಧವಾಗಿದೆ. ನೇಗಿಲಯೋಗಿಯಂತೆ ನೇರವಾಗಿ ಪ್ರಕೃತಿಯನ್ನೇ ಸೇವಿಸುವದಾದರೆ,- ಅದೂ ಒಂದು ಹಾದಿ. ಈ ಎಲ್ಲ ಸೇವೆಯಲ್ಲಿಯೂ ನೈತಿಕ ಆಚರಣೆಯಿಂದ ಚ್ಯುತರಾಗಿರಬಾರದು. ನಮ್ಮ ಧ್ಯೇಯವಾದ ಇಲ್ಲವೆ ತತ್ವಗಳನ್ನು ಸೇವಿತ ವ್ಯಕ್ತಿ ಇಲ್ಲವೆ ಸಂಸ್ಥೆಯ ಮೇಲೆ ನಾವು

ಹೋಲಿಸಲು ಹೋಗುವದು ತಪ್ಪಾದೀತು. ಆದರೆ ಆ ವ್ಯಕ್ತಿ ಇಲ್ಲವೆ ಸಂಸ್ಥೆಯ ಧೋರಣೆಯ ಹೊಣೆಯನ್ನೂ ನಾವು ಹೊತ್ತಿರಬಾರದು. ಭೀಷ್ಮ-ದ್ರೋಣರಂತೆ ಒಡೆಯನಿಗೋಸ್ಕರ ದೇಶವನ್ನರ್ಪಿಸುವದು ಕಾರ್ಯವೆಂದು ತಿಳಿದಿದ್ದರೂ ಆ ಕಾರ್ಯದ ಸಾಧು-ಅಸಾಧುತೆಗಳ ಬಗ್ಗೆ ಅಭಿಪ್ರಾಯವು ಭೀಷ್ಮ ದ್ರೋಣರಲ್ಲಿಯಂತೆ ಸ್ಪಷ್ಟವಾಗಿರಬೇಕು.

ಮೇಲಿನವರೊಡನೆ ವಿಧೇಯತೆ, ಕೆಳಗಿನವರೊಡನೆ ಮಧುರ ಸಮಾನತೆ, ಸಮಾನರೊಡನೆ ಸ್ನೇಹ,—ಇವು ಆವಶ್ಯಕ. ಆದರೆ ವಿಧೇಯತೆ ಹೇಡಿತನವಲ್ಲ. ಮಧುರ ಸಮಾನತೆಯು ಸಿಸ್ತಿನ ಶೈಥಿಲ್ಯವಲ್ಲ. ಸ್ನೇಹವು 'ಪಾರ್ಟಿ'ಯ ಗತ್ತಲ್ಲ

ಬಳ್ಳಿಯಂತೆ ಯಾವ ವ್ಯಕ್ತಿ ಇಲ್ಲವೆ ಸಂಸ್ಥೆಗೂ ಕಾಲ್ತೊಡಕಾಗಬಾರದು. ಆದರೆ ನಾಯಿಯಂತೆ ಯಾವ ಬಾಗಿಲಲ್ಲಿಯೂ ಸುಳಿದಿರಬಾರದು. ಮೋಡದಂತೆ ಗುರಿಯಿಲ್ಲದೆ ಗಾಳಿಯ ತೊತ್ತಾಗಬಾರದು. ನಿಲ್ಲಬೇಕಾದಲ್ಲಿ ನಿಲ್ಲುವ, ಉರುಳಬೇಕಾದಲ್ಲಿ ಉರುಳುವ ಗೋಲವಾಗಬೇಕು ವ್ಯಕ್ತಿತ್ವ. ಈ ಕೇಂದ್ರದಲ್ಲಿಯೇ ವ್ಯಕ್ತಿ-ಸಮಾಜಗಳ ಸಾಮರಸ್ಯದ ಬೀಜವಿದೆ.

ಮಧುರ ಪ್ರಸಂಗಗಳು ಸುಖವಿತ್ತಾಗ,-ಆ ಸುಖದಿಂದ ಮೈಮರೆತಿರಬಾರದು. ಅಗ್ನಿ ದಿವ್ಯಗಳು ಧತ್ ಎಂದು ಎದುರಿಗೆ ಬಂದು ನಿಂತಾಗ ಕೈಕಾಲುಗೆಡಬಾರದು. ಬಂದಿರುವದೆಲ್ಲವೂ ವಿಕಾಸಕ್ಕಾಗಿ ಎಂದು ತಿಳಿದು ಇದ್ದ ವಿವೇಕವನ್ನು ಉಪಯೋಗಿಸಿ ಹೆಚ್ಚಿನ ವಿವೇಕ-ಧೈರ್ಯಗಳಿಗಾಗಿ ಪ್ರಾರ್ಥಿಸಬೇಕು.

ಇದ್ದ ಕೆಲವು ವರ್ಷಗಳನ್ನು,—ಓ ಗೆಳೆಯ! ಚೊಕ್ಕಾಗಿ ಕಳೆದು ಹೋಗು. ಇದ್ದಾಗ ಹೂವಿನಂತೆ ಗಮಗಮಿಸು. ಇಲ್ಲದಾಗ ಅದರ ಸವಿನೆನಪು ಉಳಿಯಲಿ. ಹೊಳೆಯುವ ನಕ್ಷತ್ರಗಳಲ್ಲಿ ಇಂಥ ಎಷ್ಟು ಸವಿನೆನಪುಗಳು ನೆಲೆಸಿಲ್ಲ? ಆ ನೆನಪುಗಳಲ್ಲಿ ನಿನ್ನದೂ ಒಂದಿರಲಿ.

# (೧೫) ಸಮಾಜಸೇವೆ

ವ್ಯಕ್ತಿ-ಸಮಾಜಗಳ ಗಂಟು ಕಗ್ಗಂಟಾಗಿಯೇ ಉಳಿದಿದೆ. ಸಮಾಜ ದಿಂದ ವ್ಯಕ್ತಿಯು ಯಾವ ಪೋಷಣೆಯನ್ನು ಪಡೆಯಬಲ್ಲ? ಸಮಾಜಕ್ಕೆ ಏನನ್ನು ಕೊಡಬಲ್ಲ ?

ಸಮಾಜಕ್ಕೆ ಏನನ್ನು ಕೊಡಬಲ್ಲನೆಂಬುದನ್ನು ವ್ಯಕ್ತಿಯು,—ತನ್ನಲ್ಲಿ ಕೊಡಲು ಏನಿದೆ -ಯೆಂಬುದರ ಮೇಲೆ ನಿರ್ಣಯಿಸಬೇಕು. ಇದಕ್ಕಾಗಿ ವ್ಯಕ್ತಿಯು ಮೊದಲು ತನ್ನನ್ನು ತಾನು ಕಂಡುಕೊಳ್ಳಬೇಕು. ತನ್ನ ಗುಣ-ದೋಷಗಳನ್ನು ಕನ್ನಡಿಯಲ್ಲಿಯಂತೆ ಸ್ಪಷ್ಟವಾಗಿ ನೋಡಿರಬೇಕು. ಕೊಡುವ ದೆಂದರೆ,-ಅದೊಂದು 'ಕರುಣೆ'ಯ ವಿಷಯವಲ್ಲ- ತನ್ನ ವಿಕಾಸಕ್ಕೆ ಬೇಕಾದ ವಿಧಾನಗಳಲ್ಲಿ ಇದೂ ಒಂದೆಂದು ಅವನು ಸ್ಪಷ್ಟವಾಗಿ ತಿಳಿದಿರಬೇಕು.

ದೋಷಗಳನ್ನು ಆಂತರಿಕ ಮನೋಮಂದಿರದಲ್ಲಿಯೇ ಕಳೆಯುವ ಕವಣಿಕೆ ಬೇಕು. ಅವು ಮನೆ ಇಲ್ಲವೆ ಸಮಾಜದ ತಾಂಡವವಾಡಿ ಅಗ್ನಿ ಯನ್ನೆರಚಿರಬಾರದು. ಕ್ರೋಧ, ತರ್ಕಪ್ರಿಯತೆ, ವಾದಪ್ರಿಯತೆ, ನಿಷ್ಠುರ ವಿಮರ್ಶೆ, ಆತ್ಮವಿಶ್ವಾಸ, ಆತ್ಮಗೌರವ,—ಇವು ಸಮಾಜದಲ್ಲಿ ವಿರಸವನ್ನು ಬೆಳೆಸುವಂತೆ ಮುಂದುವರಿದಿರಬಾರದು. ನಮ್ಮಲ್ಲಿದ್ದ ಕಿಲ್ಮಿಷವನ್ನು ನಾವೇ ಅರಗಿಸಿಕೊಳ್ಳಬೇಕು. ಸರ್ಪದಂತೆ ಇನ್ನೊಬ್ಬರನ್ನು ಅದರಿಂದ ಗಾಸಿಪಡಿಸಿರ ಬಾರದು.

ಇದ್ದ ಗುಣಗಳ ಅರಳುವಿಕೆಯಲ್ಲಿಯೇ ಆ ಗುಣಮಂಡಿತನ ಸಫಲತೆ ಯಿದೆ. ಹೀಗೆ ಅರಳಿದ ಗುಣಗಳ ಕಂಪನ್ನು ಸವಿಯುವದರಲ್ಲಿಯೇ ಸಮಾ ಜದ ಶಕ್ತಿ-ಸ್ಫೂರ್ತಿಗಳ ಸಾಮಗ್ರಿಯಿದೆ. ಒಂದು ತೋಟದಲ್ಲಿ ಹೋದಾಗ ಅನೇಕ ಮರಬಳ್ಳಿಗಳ ನರುಗಂಪು ಬಂದು ನಮ್ಮನ್ನು ಸಂತವಿಸುತ್ತದೆ. ಇದು ಗುಲಾಬಿ, ಇದು ಮಲ್ಲಿಗೆ ಎಂದು ನಾವು ವಿಂಗಡಿಸುತ್ತೇವೆ. ಆದರೆ ಈ ವಿಂಗಡಿಕೆಯೇ ಒಂದು ಶಾಸ್ತ್ರವಾಗಿ ನಡೆದು ವಾದವಾಗಿ ಪರಿಣಮಿಸಿ ಆ ಹೂಗಂಪನ್ನು ಮರೆಯಿಸಿಬಾರದು. ಈ ದೃಷ್ಟಿಯಿಂದಲೂ ಋಷಿಯ

ಕುಲ-ಗೋತ್ರಗಳನ್ನು ಕೇಳುವ ಕಾರಣವಿಲ್ಲ. ಸಮಾಜವು ವಿವಿಧ ಪುಷ್ಪರಂಜಿತ ಉದ್ಯಾನವಾಗಬೇಕು. ಅದು ಮುಂದೊಮ್ಮೆ ನಂದನವೂ ಆದೀತು.

ನಿನ್ನಲ್ಲಿರುವ ಗುಣಗಳು ಯಾವು? ಒಂದು ಸಂಸ್ಥೆಗಾಗಿ ಉತ್ತಮವಾಗಿ ಬಿಕ್ಕೆ ಬೇಡಬಲ್ಲೆಯಾ? ಅವಶ್ಯವಾಗಿ ಬೇಡು. ಸಂಸ್ಥೆಯನ್ನು ಕಟ್ಟಬಲ್ಲೆಯಾ? ಕಟ್ಟು. ಇಲ್ಲವೆ ಬರಿ ನಿನ್ನ ಸ್ವಂತದ ಸಂಸಾರವನ್ನೇ ಚೊಕ್ಕಟವಾಗಿ ಸಾಗಿಸಿ ತೋರಿಸಬಲ್ಲೆಯಾ? ತೋರಿಸು. ಇದೆಲ್ಲವೂ ಬೇಕು. ಅದು ಹೆಚ್ಚು, ಇದು ಕಡಿಮೆ,—ಎಂದು ದೇವರ ರಾಜ್ಯದಲ್ಲಿ ವಿಂಗಡಿಸುವ ಕಾರಣವಿಲ್ಲ. ಎಲ್ಲವೂ ಹೆಚ್ಚು, ಎಲ್ಲವೂ ಕಡಿಮೆ,—ಅಣು-ಮಹತ್ತುಗಳ ಮಾನದಂಡದಿಂದ ಅವುಗಳನ್ನು ತೂಗಿ ನೋಡಿದಾಗ.

ಸಾಹಿತ್ಯ, ರಾಜಕಾರಣ, ಸಾಮಾಜಿಕ ಜೀವನ, ವಿದ್ಯಾಕ್ರಮ. ಔದ್ಯೋಗಿಕ ಜೀವನ,—ನೆಲದ ಕ್ಷೇತ್ರಗಳು ನೂರೆಂಟು. ನಿನಗೆ ಒಗ್ಗಿದ ಕ್ಷೇತ್ರದಲ್ಲಿ ನೀನು ನೇಗಿಲವನ್ನು ಹಿಡಿದು ನಿಲ್ಲು. ಹಾಗೆ ಮಾಡಿದೊಡನೆ ಸುತ್ತಲೂ ಲೋಕವು ನಿಂತು ಕೈತಟ್ಟುವದೆಂದು ಮಾತ್ರ ತಿಳಿಯಬೇಡ. ಕೈತಟ್ಟುವದರ ಬದಲು ಅದು ಕಲ್ಲೆಸೆಯಬಹುದು. ನೀನು ಕಾರ್ಯಪ್ರವೃತ್ತನಾದೆಯೆಂದು ಸೂಚಿಸಲು ಅದೂ ಒಂದು ಪೂರ್ವ ಚಿನ್ಹವೆಂದು ತಿಳಿದುಕೊ. ಒಮ್ಮನದಿಂದ ಮುಂದುವರಿ. ಬೇರೆ ಯಾವ ಮನ್ನಣೆ ಏತಕ್ಕೆ ಬೇಕು? ನಿನ್ನ ಆತ್ಮವು ನಿನ್ನನ್ನು ಮನ್ನಿಸಿದರೆ ಸಾಕು. ಆ ಘನತೆಯು ಮುಂದಿನ ಘನತೆಯಿಲ್ಲ. ಅದೇ ಪರಮ ಪದವಿ. ಹೀಗಿದ್ದೂ ಸಮಾಜವು ನಿನ್ನನ್ನು ತಬ್ಬಿಕೊಂಡಲ್ಲಿ—ಎತ್ತಿ ಗೌರವಿಸಿದಲ್ಲಿ—ಆ ಸಂತಸವನ್ನೂ ಬರಮಾಡಿಕೊಳ್ಳು. ಅದು ದೇವನಿತ್ತ ಸುಖ—ಅದನ್ನು ಕೃತಜ್ಞತೆಯಿಂದ ಸ್ವೀಕರಿಸು. ಅದು ನಿನ್ನ ಗಳಿಕೆಯೆಂದು ಮಾತ್ರ ತಿಳಿಯಬೇಡ. ಹಾಗೆ ತಿಳಿದೊಡನೆ ನಿನ್ನ ಶಕ್ತಿಪಾತವಾಯಿತೆಂದು ತಿಳಿ.

ಮುಖ್ಯವಾಗಿ ನೀನು ಸಮಾಜದಲ್ಲಿ ದುಡಿದರೂ-ಅದರಿಂದ ಸಮಾಜದ ಕಲ್ಯಾಣ ಸಾಧಿಸಿದರೂ-ನೀನು ಸಮಾಜಕ್ಕಾಗಿ ದುಡಿದುದು ನಿನ್ನ ವ್ಯಕ್ತಿತ್ವ ವಿಕಾಸವನ್ನು ಸಾಧಿಸುವದಕ್ಕಾಗಿ ಎಂಬುದನ್ನು ಯಾವಾಗಲೂ ನೆನಪಿಡು.

## (೧೬) ರಾಜಸಿಕ ಸಮಾಜದಲ್ಲಿ ಸಾತ್ವಿಕ ವ್ಯಕ್ತಿ

ಸಮಾಜವು ವ್ಯಕ್ತಿಯನ್ನು ಯಾವ ರೀತಿಯಿಂದ ಪೋಷಿಸಬಲ್ಲದು?

ಇಂದು ಈ ಪ್ರಶ್ನೆಗೆ ಜಗತ್ತು ಅನೇಕ ಉತ್ತರಗಳನ್ನು ಕೊಡುತ್ತಿದೆ ಭೌತಿಕ ಸುಖ ಸಮಾನತೆಯನ್ನು ಹೆಚ್ಚಿಸಿ ವ್ಯಕ್ತಿಯು ಸಂಸ್ಕೃತಿಗಾಗಿ ವಿರಾಮವನ್ನು ಕಲ್ಪಿಸಿಕೊಡಬೇಕೆಂದು ಯುರೋಪು ಹವಣಿಸಿತು. ಅದರ ಫಲವಾಗಿ ಮಹಾ ಯುದ್ಧಗಳು ನಡೆದಿವೆ. ವ್ಯಕ್ತಿಯು ವಿಲಾಸಿಯಾಗುತ್ತಿದ್ದಾನೆ.

ಸರ್ವೋದಯದ ಸಾಧನೆಗಾಗಿ ವ್ಯಕ್ತಿಯು ತನ್ನ ಜೀವನವನ್ನು ಸರಳ ಸಂಯಮದಿಂದ ನಡೆಯಿಸಬೇಕೆಂದು ಮಹಾತ್ಮರು ಹೇಳಿದರು ಆದರೆ ಇಾದಿನ ಜಗತ್ತಿನಲ್ಲಿ ಆಟವಾಡುವ ಶಕ್ತಿಗಳು ಪಡುವಣದ ನಾಗರಿಕತೆಯನ್ನು ಎಲ್ಲೆಡೆಗೂ ಹಬ್ಬಿಸುತ್ತಿವೆ.

ಭಾರತದಲ್ಲಿ ಸಂಧಿಕಾಲ ಬಂದೊದಗಿದೆ. ಜಾತಿಗಳು ಆರ್ಥಿಕ ಸ್ಪರ್ಧೆಯ ಮೇಲೆ ದೃಢವಾಗಿ ನಿಲ್ಲಲು ಹವಣಿಸುತ್ತಿವೆ ರಾಜರ ತಲೆ ಕೆಳಗಾದರೆ ಗಿರಣೀಶ್ವರರ ಮೋಟು ಮೇಲಾಗುತ್ತಿದೆ ಗಿರಣಿಯಾಳು ಕಣ್ತೆರೆಯುತ್ತಿದ್ದಾನೆ. ಮಧ್ಯಮವರ್ಗವು ಕಣ್ಬಿಡುತ್ತ ಬಿಡುಕುತ್ತಲಿದೆ. ಭಾರತದ ನವೀನ ಸ್ವಾತಂತ್ರ್ಯದ ಮೇಲೆ ಉಳಿದ ರಾಷ್ಟ್ರಗಳ ಕಣ್ಣಿದೆ. ಈ ಎಲ್ಲ ಅಗ್ನಿದಿವ್ಯಗಳಿಂದ ಭಾರತವನ್ನು ಪಾರುಮಾಡಲು ಹತ್ತು ಉಪಾಯಗಳು ಹುಟ್ಟಿ, ಉಪಾಯಗಳ ಸ್ಪರ್ಧೆ ನಡೆದು ದೇಶಕ್ಕೆ ಅಪಾಯವಾಗುತ್ತಲಿದೆ. ವನಚರರು, ವಿಚಾರವಂತರು, ಒಕ್ಕಲಿಗರು, ಮಜೂರಿಯವರು, ಸನಾತನಿಗಳು, ವಿನೂತನಿಗಳು, ಪ್ರಜಾಪ್ರಭುತ್ವವಾದಿಗಳು, ಸಾಮ್ಯವಾದಿಗಳು, ಸ್ವಾರ್ಥಸಾಧಕರು, ಆದರ್ಶವಾದಿಗಳು, ಜಾತಿನಿಷ್ಠರು, ವಿಶ್ವಬಾಂಧವ್ಯದ ಪ್ರಚಾರಕರು, ಪ್ರಾಂತೀಯರು, ರಾಷ್ಟ್ರೀಯರು,—ಹೀಗೆ ದೇಶವು ಬಣ-ಬಣಗಳ ರಣವಾಗಿದೆ; ಪ್ರಳಯಕ್ಕೆ ಔತಣವೀಯುತ್ತಿದೆ. ಇಂಥ ಸಮಾಜದಿಂದ ವ್ಯಕ್ತಿಯು ಏನನ್ನು ಅಪೇಕ್ಷಿಸಬಲ್ಲ ?

ಈ ಸಮಾಜದ ವಿರಾಟರೂಪದಲ್ಲಿಯೂ ಅವನು ದೈವಿಕದರ್ಶನದ ಒಂದು ಗತಿಯನ್ನು ಕಾಣಬೇಕು. ಸ್ಥಿತಿಯ ಮೊದಲಿನ ಪ್ರಳಯ ಇದು.

ಯಾವ ಸ್ಥಿತಿಯು ಕೊಂಚನ್ನು ಈ ಪ್ರಳಯವು ದೈವೀಸಂಕಲ್ಪದ ಮೇರೆಗೆ ಹಾಕುತ್ತಿದೆಯೆಂಬುದನ್ನು ಗುರುತಿಸಿ ಈ ಪ್ರಳಯದಲ್ಲಿದ್ದ ಸ್ಥಿತಿಯ ಗರ್ಭವನ್ನು ವ್ಯಕ್ತಿಯು ಪೋಷಿಸಬೇಕು. ತನ್ನ ಶಕ್ತಿಗನುಸರಿಸಿ ಪ್ರಳಯದ ವಿರಾಟರೂಪವು ಸಾಧ್ಯವಿದ್ದಷ್ಟು ಸೌಮ್ಯವಾಗುವಂತೆ ನಡೆಯಬೇಕು. ನರಸಿಂಹನು 'ಶಾಂತ' ನರಸಿಂಹನಾಗಲು ಹಾದಿ ಮಾಡಿಕೊಡಬೇಕು. ಅಂದರೆ, ಮತ-ಅಭಿಪ್ರಾಯ-ಸಿದ್ಧಾಂತಗಳೇನೇ ಇರಲಿ, ಸಮಾಜದಲ್ಲಿಯ ಸತ್ವವನ್ನು ಗುರುತಿಸಿ ಅದನ್ನು ಸಂವರ್ಧಿಸಬೇಕು. ನಾನು ಸಮತಾವಾದಿಯೆಂದಿಟ್ಟುಕೊಳ್ಳೋಣ ಶೀಲವಿಲ್ಲದ ಸಮತಾವಾದಿಗಿಂತ ಶೀಲವಂತನಾದ ಪ್ರಜಾಪ್ರಭುತ್ವವಾದಿಯೇ ಮೇಲಾಗಬಹುದು ಶೀಲರಹಿತನು ಸಮತಾವಾದಕ್ಕೇ ಕಲಂಕಪ್ರಾಯ ಶೀಲವಂತನು ನಾಳೆ ಸಮತಾವಾದಿಯಾದರೆ ಅದರ ದೊಡ್ಡ ಬಲವಾದಾನು. ಒಟ್ಟಾರೆ ಅಸತ್ಯದ ಮೇಲೆ ನಿಂತ—ಇಲ್ಲವೆ ಅನೀತಿಯನ್ನು ಆಶ್ರಯಿಸಿದ—ಯಾವ ಸಂಗಡಿಕೆಗಳನ್ನೂ ಬೆಳೆಸಿರಬಾರದು. ಸತ್ಯ-ನೀತಿಗಳಿದ್ದಲ್ಲಿ ಯಾವ ವಿಂಗಡಿಕೆಯನ್ನೂ ಮಾಡಿರಬಾರದು. ಜಾತಿ-ಮತ-ಪಂಥ,—ಇವುಗಳಿಂದ ಕಣ್ಣುಕುರುಡಾಗಬಾರದು ಜೀವನದಲ್ಲಿಯೂ ಈ ದರ್ಶನದಂತೆ ನಡೆಯಬೇಕು.

ವಿಶಾಲ ಘಟನೆ ಇಲ್ಲವೆ ಕ್ರಾಂತಿ ದೈವೀಸಂಕಲ್ಪದ ಫಲ. ಅದನ್ನು ಯಾರೂ ತಡೆಗಟ್ಟಲಾರರು. ನೃಸಿಂಹನ ಕಾರ್ಯ ಮುಗಿದೊಡನೆ,—ಅವನು ಶಾಂತವಾಗಲೆಂದು ಪ್ರಲ್ಹಾದನಂತೆ ವ್ಯಕ್ತಿಯು ಪ್ರಾರ್ಥಿಸುತ್ತಿರಬೇಕು.

ಮತ ಮುಖ್ಯವಲ್ಲ: ಕೃತಿ ಮುಖ್ಯ. ಲೋಕಕಲ್ಯಾಣದ ಚಿಂತನೆಯಲ್ಲಿ ಎಲ್ಲ ಮತಗಳೂ ಒಮ್ಮತವಾಗುತ್ತವೆ. ಅದನ್ನು ಸಾಧಿಸುವ ಮಾರ್ಗದ ಶೋಧನೆಯಲ್ಲಿ ಅವು ಬೇರ್ಪಡುತ್ತವೆ ಯಾವ ಯಾವ ಕಾಲ-ಸಂದರ್ಭ ಸನ್ನಿವೇಶಗಳಲ್ಲಿ ಯಾವ ಮತವು ಕಲ್ಯಾಣಕರವೋ ಅದನ್ನು ಎತ್ತಿ ಹಿಡಿಯುವ ಧೈರ್ಯ-ವಿವೇಕಗಳು ಬೇಕು. ವಿರಸವನ್ನು ಕಡಿಮೆ ಮಾಡಿ ಸಾಮರಸ್ಯವನ್ನು ಹೆಚ್ಚಿಸುವದರಲ್ಲಿಯೇ ವ್ಯಕ್ತಿಯ ಸಮ್ಯಕ್‌ದರ್ಶನವಿದೆ.

ಒಟ್ಟಾರೆ ಇಂದಿನ ಸಮಾಜದಿಂದ ವ್ಯಕ್ತಿಯು ಅದರ ವಿರಾಟರೂಪದ ದರ್ಶನವನ್ನು ಪಡೆಯಬಲ್ಲ. ತನ್ನ ಶಾಂತಿಯು ಕಲುಕದಂತೆ ಅದನ್ನು ಪಡೆದು

ಆ ವಿರಾಟಶಕ್ತಿಯನ್ನೊಳಗೊಂಡ ಭವ್ಯ ಸ್ಥಿತಿಗಾಗಿ ಅವನು ತನ್ನ ಜೀವನವನ್ನು ಮುಡಿಪಾಗಿಸಬೇಕು.

ಈ ಕ್ರಾಂತಿಯಲ್ಲಿ ಸಾತ್ವಿಕತೆಯು ಶಕ್ತಿಹೀನ, ನಿರುಪಯುಕ್ತ, ಅಪಾಯಕರ,— ಎಂದೂ ಒಂದು ಮತವಿದೆ. ಇದು ಬಹುಮತವಾದರೂ ಆಗಬಹುದು. ಮತ-ಮತಗಳ ಕಲಹದಾಂತೆ ಇಂಥ ಅವಧಿಯಲ್ಲಿ ತಮೋಗುಣವಿದ್ದ ರಜಸ್ಸೂ ಸಾತ್ವಿಕತೆಯನ್ನು ಎದುರಿಸುತ್ತದೆ. ಅದನ್ನು ಕ್ಷುಲ್ಲಕಪದಾರ್ಥವೆಂದು ತಿರಸ್ಕರಿಸುತ್ತದೆ. ಜೀವನದ ಯಾವ ರಂಗದಲ್ಲಿಯೂ ಈ ವಿರೋಧವನ್ನು ಇಂದು ನಾವು ಕಾಣಬಹುದು. ಈ ಹುಂಬತನವನ್ನು ನಂಬುಗೆಯು ಇಂದು ಎದುರಿಸಬೇಕಾಗಿದೆ.

ಈ ರಾಜಸಿಕ ಸ್ವಭಾವಕ್ಕೆ ಸಾತ್ವಿಕರ ತಪ್ಪುಗಳೇ ಅನ್ನವಾಗುತ್ತವೆ. ಆದಕಾರಣ ಸಾತ್ವಿಕತೆಯು ರಾಜಸಿಕವಾಗಿ ಕಾರ್ಯಪ್ರವೃತ್ತವಾಗಬೇಕಾದಾಗ,— ಅದು ಮೊದಲು ಇನ್ನಿಷ್ಟು ಸಾತ್ವಿಕವಾಗಬೇಕು. ತನ್ನ ದೋಷಗಳನ್ನು ತಾನು ಕಾಡು ತಿದ್ದಿಕೊಳ್ಳಬೇಕು ಅಂತರ್ಮಥನದಲ್ಲಿ ಯಾವ ಕಿಲ್ಬಿಷವೂ ಅದಕ್ಕೆ ದೊರಕಿರಬಾರದು. ಅಂತರಂಗವು ಶುದ್ಧವಿದ್ದಾಗ ಬಹಿರಂಗದ ಯಾವ ಶಕ್ತಿಯನ್ನೂ ಅದು ಎದುರಿಸಬಹುದು.

ಅಧಿಕಾರವಿದ್ದಲ್ಲೆಲ್ಲ ತಮೋರಜಗಳ ಪ್ರಧಾನತೆ ಇಲ್ಲದಿಲ್ಲ. ಸಮಾಜವು ರಣಹದ್ದುಗಳ ಬೀಡಾದಾಗ, ಕುಸ್ತಿಯ ಕಣವಾದಾಗ, ಕುದುರೆ ಶರ್ಯತ್ತಿನ ಕ್ರೀಡಾಂಗಣವಾದಾಗ,— ಸಾತ್ವಿಕತೆಯು ಕಂಚನಂತೆ ವ್ಯಕ್ತವಾಗುತ್ತದೆ. ಅದು ಸುಮ್ಮನಿದ್ದರೂ ಅದಕ್ಕೆ ತಿವಿಯುದ ಅಂಕುಶವಿಲ್ಲ, ತಾಗದ ಕೈಯಿಲ್ಲ. ಸಾತ್ವಿಕತೆಯ ಅಸ್ತಿತ್ವವೇ ಒಂದು ಅಪರಾಧವಾಗಿ ಅದರ ಅಂತ್ಯವೇ ಗುರಿಯಾಗುತ್ತದೆ.

ಆಗ ಸಾತ್ವಿಕತೆಯು ಏನು ಮಾಡಬೇಕು ? ನಿಃಸ್ತ್ರೈಗುಣ್ಯವಾದ ಅನಂತತೆಗೆ-ದೈವಿಕತೆಗೆ ಶರಣುಹೋಗಿ ಹೊಸ ಚೈತನ್ಯವನ್ನು ಪಡೆಯಬೇಕು. ತುರೀಯಾವಸ್ಥೆಯಿಂದ ಗರೀಯವಾದುದನ್ನು ತರಬೇಕು. ಒಳಗಿನ ಜಗತ್ತನ್ನು ಕಣ್ದೆರೆದು ನೋಡಬೇಕು. ಮೇಲಿನ ಬುದ್ಧಿ, ಪ್ರಕಾಶಿತ ಬುದ್ಧಿ, ಅಂತಃಸ್ಫುರಣಗಳ ದ್ವಾರವಾಗಿ ಬಂದ ಪರಾಪ್ರಕೃತಿಯ ಆದೇಶಗಳನ್ನು ಗುರುತಿಸುವ ತಿಳಿವನ್ನು ಪಡೆಯಬೇಕು. ಶುದ್ಧಾಂತಃಕರಣದಿಂದ ಚೈತ

ಕೇಂದ್ರವನ್ನು ಜಾಗೃತವಾಗಿಸಬೇಕು. ಈ ಪ್ರಜ್ಞಾವಿಕಾಸದಿಂದ ನವೀನ ಶಾಂತಿಯು ಲಭಿಸುವದು. ಯಾವ ಸನ್ನಿವೇಶವೂ ಅದನ್ನು ಕದಡಿಸಲಾರದು. ಮಾಡಬೇಕಾದ ಕಾರ್ಯದ ಹೊಳವು ಆಗ ಸ್ಪಷ್ಟವಾಗುವದು. ಅದನ್ನೆಸಗಲು ಬೇಕಾದ ಧೈರ್ಯವು ಬರುವದು. ಹೀಗೆ ಸಾತ್ವಿಕತೆಯು ತನ್ನ ಅಸ್ತಿತ್ವವನ್ನು ಕಾಯ್ದುಕೊಂಡ ತನ್ನ ಕರ್ತವ್ಯವನ್ನೆಸಗದೆ ಇಂದಿನ ಸಮಾಜದಲ್ಲಿ ಅನ್ಯ ಗತಿಯಿಲ್ಲ. ಇಲ್ಲದಿದ್ದರೆ ಸಾತ್ವಿಕನು ದಾವುತರ ಕುದುರೆಗಳ ಕಾಲ್ಕೆಳಗೆ ಸಿಕ್ಕ ಮಗುವಿನಂತೆ ಜರ್ಜರಿತನಾದಾನು. ಧ್ರುವತಾರೆಯ ಬೆಳಕಿನಲ್ಲಿ ನಡೆಯದೆ ಅನ್ಯ ಉಪಾಯವಿಲ್ಲ.

ಸಾತ್ವಿಕತೆಯು ತನ್ನಂತಹ ಬದುಕನ್ನು ಸಮಾಜದಲ್ಲಿ ಕಂಡು ಅದರೊಡನೆ ಒಂದಾಗಲು ಸಹ ಹವಣಿಸಬೇಕು. ಈ ಸಂಘಶಕ್ತಿಯೂ ಸಾತ್ವಿಕತೆಗೆ ಅವಶ್ಯ. ಒಂದು ಹನಿ ಸೀರಿದ್ದರೆ ನೆಲದಲ್ಲಿ ಇಂಗಿ ಹೋಗುತ್ತದೆ. ಹನಿ ಹನಿ ಕೂಡಿ ಹೊನಲಾದಲ್ಲಿ ನೆಲವನ್ನು ತೋಯಿಸಿ ಅದು ಪ್ರವಹಿಸುತ್ತದೆ. ಇಂಥ ಪ್ರವಾಹವೂ ಲೋಕನಿಯಾಮಕನ ಶಾಶ್ವತ ನಿಯಮಗಳಲ್ಲಿ ಒಂದು.

ಇತಿಹಾಸಪರಿಶೀಲನದಿಂದ ಸಾತ್ವಿಕತೆಯ ಬಲಾಬಲತೆಗಳನ್ನು ಅರಿತು ಅಬಲತೆಗಳನ್ನು ಕಳೆಯುವ ದಾರಿ ಕಾಡುಕಬೇಕು. ಮಹಾತ್ಮರಲ್ಲಿ ಶರಣು ಹೋಗಬೇಕು. ಸಮಾಜದಲ್ಲಿ ರುದ್ರವಾದುದಿದ್ದಂತೆ ಶಿವವಾದುದೂ ಇದೆ. ಸತ್ಯ-ಶಿವ-ಸುಂದರತೆಗಳ ಶಿಖರವಿದ್ದಂತಿರುವ ಋಷಿಗಳನ್ನು ಗುರುತಿಸಿ ಅವರಿಂದ ಅಭಯವನ್ನು ಪಡೆದು ಸಮಾಜದ ಶಿವಸ್ವರೂಪವನ್ನು ಸ್ಫುಟವಾಗಿಸಲು—ಪ್ರಳಯದ ಗರ್ಭದಲ್ಲಿದ್ದ ಸ್ಥಿತಿಯನ್ನು ಅರಳಿಸಲು—ವ್ಯಕ್ತಿಯು ತನ್ನನ್ನು ಅಣಿಗೊಳಿಸಿಕೊಳ್ಳಬೇಕು.

ಓ ಗೆಳೆಯ! ಸಾತ್ವಿಕತೆಗೆ ಇದನ್ನುಳಿದು ಬೇರೊಂದು ಗತಿಯಿಲ್ಲ. ಅಲ್ಲದೆ ರುದ್ರವನ್ನು ಶಿವದಲ್ಲಿ ಲೀನವಾಗಿಸುವ ಹೊಣೆಯೂ ಅದರದು. ನಿನ್ನ ಹೃದಯದಲ್ಲಿ ದೈವಿಕತೆಗೆ ಪಟ್ಟಗಟ್ಟಿ ತಾಂಡವ ನೃತ್ಯಕ್ಕೆ ಬೆದರದೆ ನಟರಾಜನ ಲಾಸ್ಯಕ್ಕಾಗಿ ಎದುರು ನೋಡು.

## (೧೭) ಪೂರ್ಣ ಜೀವನ

ಜಗತ್ತು ಸತ್ಯವೋ ಮಿಥ್ಯೆಯೋ ಎಂಬ ವಾದದಲ್ಲಿ ಹುರುಳಿಲ್ಲ, ಕಣ್ಣು ಮುಚ್ಚಿದೊಡನೆ ಜಗತ್ತೆಲ್ಲ ಮಿಥ್ಯ: ಅಷ್ಟರಲ್ಲಿ ಯಾರಾದರೂ ಕಪೋಲಕ್ಕೆ ಒಂದೇಟು ಕೊಟ್ಟು ಗಡಬಡಿಸಿ ಕಣ್ತೆರೆಯುವಂತೆ ಮಾಡಿದರೆ ಜಗತ್ತು ಸತ್ಯ ಎಂದು ಅನುಭವ ಬರುತ್ತದೆ. ಅಕ್ಷರ ಬ್ರಹ್ಮನ ಸಾಕ್ಷಾತ್ಕಾರಕ್ಕೆ ಸಿದ್ಧನಾದಾಗ ಜಗತ್ತೆಲ್ಲ ಅದೃಶ್ಯವಾಗಿ ಮಾಯೆಯೆಂದು ಹೊಳೆಯುತ್ತದೆ. ಕ್ಷರ ಪುರುಷನ ಇಲ್ಲವೆ ಸಗುಣ ಬ್ರಹ್ಮನ ಉಪಾಸನೆಗೆ ಸಿದ್ಧರಾದಾಗ ಜಗತ್ತು ದಿವ್ಯ ಸತ್ಯವಾಗಿ ಕಾಣುತ್ತದೆ. ಕ್ಷರ ಪುರುಷೋತ್ತಮನ ಉಪಾಸನೆಯಲ್ಲಿಯೇ ಜೀವ-ಜಗತ್ತುಗಳ ಸಮನ್ವಯವಿದೆ.

ಜಗತ್ತಿನಲ್ಲಿ ಈಶ್ವರನ ಶೋಧನೆಗೆಯ್ಯಲು ಬಹಳ ಕಷ್ಟಪಡಬೇಕಾಗಿಲ್ಲ. ಒಂದು ಹುಲ್ಲುಕಡ್ಡಿಯನ್ನು ಸಹ ಶ್ರೀ ಪಂತರೆಂಬ ಸಂತರಂತೆ ಹಿಡಿದು, "ಇದು ಶೂನ್ಯದಿಂದ ಬಂದಿದೆಯೆ ? ಇದಕ್ಕೆ ಅಸ್ತಿತ್ವವಿಲ್ಲವೆ ? ನಾಸತೋ ವಿದ್ಯತೆ ಭಾವಃ. ಸಜೀವ-ನಿರ್ಜೀವ ಸ್ಥಿತಿಯೊಳಗಿಂದ ಹಾಯ್ದು ಈ ಕಡ್ಡಿಯು ಎಷ್ಟೊಂದು ಶಕ್ತಿಗಳನ್ನು ಪ್ರಕಟಮಾಡಿಲ್ಲ ? ಜಗತ್ತಿನೊಳಗಿನ ಯಾವ ಪದಾರ್ಥದ ಶಕ್ತಿಗಳಾದರೂ ಅನಂತವಾದುವು. ಅಶಕ್ತ ಇಲ್ಲವೆ ಸಾಂತವಾದ ಒಂದಾದರೂ ವಸ್ತು ಜಗತ್ತಿನಲ್ಲಿಲ್ಲ" ಎಂದು ಹೇಳುವದು ಸಾಧ್ಯ. ಸ್ಥೂಲ-ಸೂಕ್ಷ್ಮಗಳನ್ನು ಮೀರಿ ಒಂದು ವಸ್ತುವಿನ ಕಾರಣ-ರೂಪವನ್ನು ಹುನಗಂಡಾಗ ಅದರ ದಿವ್ಯ ಸತ್ಯವು ನಮಗೆ ಹೊಳೆಯುತ್ತದೆ. ಪ್ರಕೃತಿಯಲ್ಲಿ ವರ್ಡ್ಸ್‌ವರ್ಥ್-ಶೆಲ್ಲಿ-ಕೀಟ್ಸ್ ಕಂಡ ಪರಾಪ್ರಕೃತಿ, ಅರ್ಜುನನು ಕೃಷ್ಣನಲ್ಲಿ ಕಂಡ ಅವತಾರ ಮೂರ್ತಿ, ಶಿಷ್ಯನು ಗುರುವಿನಲ್ಲಿ ಕಾಣುವ ದೇವಮಾನವ,—ಜಗತ್ತಿನಲ್ಲಿ ಆವಿರ್ಭವಿಸುವ ಇಂತಹ ಮಹಾ ಸತ್ಯವನ್ನು ಕಾಣಲು ಕಾರಣಿಕ ದೃಷ್ಟಿ ಬೇಕು. ನಿಸರ್ಗದ ವಿಶೇಷ ರಾಮಣೀಯಕತೆಯಿದ್ದ ದೃಶ್ಯ ಇಲ್ಲವೆ ವಸ್ತುವಿನಲ್ಲಿ ಮೊದಲು ಸೌಂದರ್ಯವು ಕಾಣಿಸಿಕೊಳ್ಳುವಂತೆ ವಿಶಿಷ್ಟ ಯೋಗ್ಯತೆಯಿದ್ದ ಮಾನವನಲ್ಲಿ ಮೊದಲು ದೈವಿಕತೆಯು ಕಾಣಿಸಿಕೊಳ್ಳುತ್ತದೆ. ಕಾರಣಿಕ ದೃಷ್ಟಿಯು

ತುರೀಯವಾದಾಗ ' ಸರ್ವಂ ಖಲ್ವಿದಂ ಬ್ರಹ್ಮ '—ಸಿಂಹ-ಮೊಸಳೆಗಳೂ—ಖಲರೂ ಸಹ— ಬ್ರಹ್ಮವೆಂಬ ದೃಷ್ಟಿಯು ನೆಲೆನೆಲೆಯಾಗುತ್ತದೆ.

ಆಂತರಿಕ ಜಗತ್ತನ್ನು ಎರಡು ರೀತಿಯಲ್ಲಿ ಅನುಸಂಧಾನಿಸಬಹುದು. ಒಂದನೆಯದಾಗಿ,—ಭಕ್ತಿ ಇಲ್ಲವೆ ಜ್ಞಾನದ ಮಹಾ ನಿಮಿಷಗಳನ್ನು ಬರಮಾಡಿಕೊಂಡು. ಒಮ್ಮೊಮ್ಮೆ ಎದ್ದ ಭಾವ ತರಂಗಗಳು ಇಲ್ಲವೆ ವಿಚಾರ ತರಂಗಗಳು—ಚಿತ್ತದೊಳಗಿಂದ ಹಾಯ್ದು ಬಂದ ದಿವ್ಯ ದೇಶಗಳು—ಅನುಪಮ ಆನಂದವನ್ನು ಕೊಡುತ್ತವೆ. ಆಗ ನಾವು **ಪರವಶರಾಗುತ್ತೇವೆ.** ಇಂಥ ರಸನಿಮಿಷ ಮಾಲೆಯ ಸಂಗ್ರಹದ ಮೇಲೆ ಮಾತ್ರ ಜೀವಿಸಲು ಬಯುತ್ತೇವೆ. ಬರಿ ಅಮೃತದ ಹಸಿಗಾಗಿ ಜೀವದ ರಸನೆಯು ಜಿನುಗುತ್ತದೆ. ಮಳಲಿನರಣ್ಯವನ್ನು ದಾಟಲು ಒಳಗಿನ ಕೋಶವೊಂದರಲ್ಲಿ ನೀರನ್ನು ಸಂಗ್ರಹಿಸಿಕೊಂಡ ಒಂಟೆಯಂತೆ ನಾವು ಈ ಜೀವನಯಾತ್ರೆಯನ್ನು ಸಾಗಿಸಲು ಎದುರು ನೋಡುತ್ತೇವೆ.

ಆದರೆ ಇದು ಅಪೂರ್ಣ ದೃಷ್ಟಿ. ಇಂಥ ತಾಳ್ಮೆಗೇಡಿತನ ಜೀವನಕ್ಕೆ ಅಹಿತಕಾರಿ. ಜೀವನವೆಂದರೆ ಬರಿ ಕೆಲವು ಶೃಂಗಗಳಲ್ಲ,-ಇಡಿ ಪರ್ವತವೂ ಅಹುದು ತಗ್ಗುಗಳೂ ಅದರ ರೂಪದ ಒಂದು ಭಾಗ. ಸಮನೆಲಕ್ಕೂ ಅದರ ಶರೀರ ರಚನೆಯಲ್ಲಿ ಒಂದು ಸ್ಥಾನವಿದೆ. ಆಂತರಿಕ ಜೀವನದಲ್ಲಿಯೂ ಇದನ್ನು ನಾವು ನೆನೆಯಬೇಕು. ಮನನ, ನಿಧಿಧ್ಯಾಸ. ಅಂತರ್ಮಥನ, ದೈನಂದಿನದ ಪ್ರಾರ್ಥನೆ,—ಇವೂ ಆವಶ್ಯಕ ಸಾಧನೆಗಳು. ಇಷ್ಟೇ ಅಲ್ಲ. ಇವಿಲ್ಲದೆ ಆ ರಸನಿಮಿಷಮಾಲೆಯು ಕಾಣಿಸಿಕೊಳ್ಳುತ್ತಲೇ ಇರಲಿಲ್ಲ. ಆ ರಸನಿಮಿಷಗಳು ಎಷ್ಟು ದೈವಿಕವೋ ಈ ದಿನಚರ್ಯೆಯೂ ಅಷ್ಟೇ ದೈವಿಕವಾದುದು. ದಿನ ಬೆಳಗಾದರೆ ಸೂರ್ಯ ಉದಯಿಸುವನೆಂದು ಅವನ ದೈವಿಕತೆಯು ಕಡಿಮೆಯಾಗಬಹುದೋ? ಭೂಮದಷ್ಟೇ ಅಣುವೂ ಸತ್ವವುಳ್ಳದು. ದಿನದ ಜೀವಿತದ ದೈವಿಕತೆಯನ್ನು ಕಂಡುಕೊಂಡಾಗ ಮಾತ್ರ ಗೌರೀಶಂಕರವು ಗೋಚರವಾದೀತು. ಗೌರೀಶಂಕರದ ಮೇಲೆ ನಿಂತು ನೋಡಿದ ದೃಷ್ಟಿಗೆ ಈ ರಸನಿಮಿಷಶೃಂಗಗಳೂ ಸಮನೆಲವೂ ಒಂದೇ ಆಗಿ ಕಾಣುವವು.

ಜಗತ್ತಿನ ವಿಷಯದಲ್ಲಿಯೂ ಹೀಗೆಯೇ. ಕಾರಣಿಕ ಇಲ್ಲವೆ ತುರೀಯ ದೃಷ್ಟಿ ಶಾಶ್ವತವಾಗಿ ನೆಲಸುವತನಕ ಈ ಚಂಚಲತೆ ತಪ್ಪಿದ್ದಲ್ಲ. ಆದರೆ

ಕಾರಣಿಕ ನಿಮಿಷಗಳಷ್ಟೇ ಮುಖ್ಯವೆಂದೂ ಜೀವಿತದ ಉಳಿದ ಭಾಗವೆಲ್ಲ ನಿಃಸಾರವೆಂದೂ ನಾವು ಎಣಿಸುವ ಕಾರಣವಿಲ್ಲ. ಯೋಗಸ್ಥರಾಗಿ ಜೀವನವನ್ನು ಪರೀಕ್ಷಿಸದೆ ಕಾರಣಿಕದೃಷ್ಟಿ ಸ್ಥಾಯಿಯಾಗುವದು ಸಾಧ್ಯವಿಲ್ಲ. ಆ ದೃಷ್ಟಿಯ ಅನುಭವ ಬರದೆ ದಿನದ ಯೋಗ ಮುಂದುವರಿಯುವ ಹಾಗಿಲ್ಲ. ಹೀಗೆ ಪರಸ್ಪರಾವಲಂಬಿಯಾಗಿದೆ ಈ ಮಾತು. ಸಾಕ್ಷಿಮಯ ಜೀವನ, ಸಮರ್ಪಣ ಭಾವ, ಸಹಾನುಭೂತಿ, ಕರುಣೆ, ಆನಂದ, ಉಲ್ಲಾಸ.–ಇವು ದೈನಂದಿನದ ಜೀವನದ ಸಣ್ಣಪುಟ್ಟ ಸಂದರ್ಭಗಳಲ್ಲಿಯೂ ಒಡಮೂಡಬೇಕು. ದಿನದ ಅಂತಃಶೋಧನೆಯಲ್ಲಿ ಈ ದೃಷ್ಟಿಯಿಂದ ಕಾಣಿಸಿಕೊಳ್ಳುವ ಏರಿಳಿತಗಳನ್ನು ನಾವು ಪರೀಕ್ಷಿಸಬೇಕು. ಆಗ ಜೀವನಪ್ರವಾಹವು ಒಂದು ತರಂಗಿಣಿ. ಬರಿ ಒಂದು ಜಲಪಾತವಲ್ಲ; ಅದರ ಪ್ರತಿಯೊಂದು ಮಣಿತವೂ ಸುಂದರ, ಮಯವೆಂದು ತಿಳಿಯುವದು. ಅದರಲ್ಲಿ ಒಂದು ಸಾತತ್ಯವಿದೆಯೆಂಬುದನ್ನು ನಾವು ಮನಗಾಣುವೆವು. ಕೆಲವೊಂದು ಬಿಂದುಗಳಷ್ಟೇ ಕಾಣಿಸಿಕೊಳ್ಳದೆ ಆ ಬಿಂದುಗಳನ್ನೊಳಗೊಂಡ ಮಂಡಲವೇ ರೂಪಗೊಳ್ಳುವದು.

ಹೀಗೆ ಮಂಡಲದ ಪೂರ್ಣಾಕೃತಿಯನ್ನು ನಾವು ಕಂಡುಕೊಂಡಾಗ ಎಲ್ಲ ಮಂಡಲಗಳು ಕೂಡಿ ಸಿದ್ಧವಾಗಿರುವ ಗೋಲವನ್ನು—ವಿಶ್ವವನ್ನು—ತಿಳಿಯಲು ನಮಗೆ ವೇಳೆ ಹಿಡಿಯುವದಿಲ್ಲ. ಜೀವವನ್ನು ಪೂರ್ಣವಾಗಿ ತಿಳಿದಾಗ ವಿಶ್ವದ ಅರ್ಥವೂ ತನಗೆ ತಾನೆ ಸ್ಫುಟವಾಗುತ್ತದೆ. ಏಕೆಂದರೆ ಜೀವ—ಜಗತ್ತುಗಳೆರಡೂ ಪುರುಷೋತ್ತಮನ ಲೀಲಾಮಯ ಆವಿರ್ಭಾವಗಳು.

ಅಂತೇ ಓ ಗೆಳೆಯ ! ಓ ಕಾವ್ಯಪ್ರಿಯ ! ಪದ್ಯಕಾವ್ಯೋಪಾಸಕ ! ಗದ್ಯವೂ ಪದ್ಯದಷ್ಟೇ ಹೃದ್ಯವೆಂಬುದನ್ನು ತಿಳಿ. ಕಾವ್ಯದ ಪೂರ್ಣತೆಯು ಗದ್ಯ–ಪದ್ಯಗಳೆರಡನ್ನೂ ಒಳಗೊಂಡಿದೆ. ಪದ್ಯದಲ್ಲಿ ದಿವ್ಯದೃಷ್ಟಿ ಹೆಚ್ಚಾಗಿ ಫಲಿಸಿದರೆ ಗದ್ಯದಲ್ಲಿ ಅದನ್ನು ನೆಲೆನೆಲೆಯಾಗಿ ನಿಲ್ಲುವಂತೆ ಮಾಡುವ ಭೂಮಿಕೆಯಿದೆ. ಪದ್ಯ–ಗದ್ಯಗಳಲ್ಲಿ ಒಂದೇ ವರದೃಷ್ಟಿ ನೆಲೆಯಾಗಿ ನಿಂತು ಕಾವ್ಯದ ವಿಷಮತೆಯನ್ನು ಕಳೆಯುವ ತನಕ,–ಈ ಎರಡು ಪ್ರಕಾರಗಳೂ ಪರಸ್ಪರ ಪೂರಕವಾಗಿವೆಯೆಂಬುದನ್ನು ತಿಳಿ. ನಿನ್ನ ಜೀವನಕ್ಕೆ ಅರ್ಧಾಂಗ

ವಾಯುವು ಬಡಿದುಕೊಳ್ಳದಿರಲಿ. ಅರ್ಧ ಅಂಗವು ಊನವಾದರೆ ದೇಹಕ್ಕೇ ನ್ಯೂನತೆ ಇಲ್ಲವೆ ಚ್ಯುತಿ ಬರುವದೆಂಬುದನ್ನು ನೆನಪಿಡು. ಜೀವನದ ಪರಿ ಳಿತಗಳನ್ನು ಸಮವಿಶಾಲದೃಷ್ಟಿಯಿಂದ ನೋಡು. ಮುಗಿಲಿನ ಮೇಲಿಂದ ವರುಷಕ್ಕೊಮ್ಮೆ ಬೀಳಬಹುದಾದ ಅಮೃತದ ಹನಿಗಾಗಿ ಎದುರು ನೋಡುವ ಚಾತಕವಿಷ್ಟೇ ಆಗಬೇಡ. ದಿನಬೆಳಗಾದರೆ ಕಾಣುವ ನಾನಾ ತನಿರಸಗಳೊ ಳಗಿಂದ ಅಮೃತದ ಹನಿಯೊಂದನ್ನೇ ಹೀರುವ ಜೀವಹಂಸವೂ ಆಗಲಿ. ಪ್ರಕೃತಿಯ ಅಂಗಾಂಗಗಳಲ್ಲಿಯೂ ಜೀವಜಾತದ ಕಣಕಣದಲ್ಲಿಯೂ ಪರಾ ಪ್ರಕೃತಿಯು ಅವತರಿಸಿರುವಳೆಂಬುದನ್ನು ಕಣ್ಣಾರೆ ಕಂಡುಕೊಳ್ಳು

# (೧೮) ಸುಖ-ದುಃಖಗಳ ದ್ವಂದ್ವ

ಒಮ್ಮೊಮ್ಮೆ ಜೀವನದ ಉಗಿಬಂಡಿಯು ಕತ್ತಲೆಯ ಗವಿಗಳೊಳಗಿಂದ ಹಾಯುವಂತೆ ಭಾಸವಾಗುತ್ತದೆ. ಆಗ ಅಸಹಾಯರಾಗಿ ನಾವು ಸುಮ್ಮನೆ ಕುಳಿತುಕೊಳ್ಳುತ್ತೇವೆ. ಒಮ್ಮೆ ಈ ಗವಿಯ ವಿಸ್ತರಣ ಮುಗಿದು ಬಿಡಲೆಂದು ನಾವು ತಾಳ್ಮೆಗೆಡುತ್ತೇವೆ. ಪ್ರವಾಸದಲ್ಲಿಯ ಈ ಭಾಗ ನಿರರ್ಥಕವೆಂದು ನಮಗೆನಿಸುತ್ತದೆ.

ಜೀವನಯಾತ್ರೆಯಲ್ಲಿಯೂ ಇಂಥ ವಿಷಸಮಯ ಬಂದಾಗ ಅದು ತೊಲಗಲೆಂದು ನಾವು ಜಗನ್ನಿಯಾಮಕನನ್ನು ಪ್ರಾರ್ಥಿಸುತ್ತೇವೆ. ವಿಕಾಸಕ್ಕೆ ಅವರಲ್ಲಿ ಯಾವ ಅವಕಾಶವೂ ಇಲ್ಲವೆಂದು ನಮ್ಮ ಕಲ್ಪನೆಯಾಗಿರುತ್ತದೆ.

ಆದರೆ ಜೀವನದ ಮಹಾಪಥವನ್ನು ರಚಿಸಿದ ಪ್ರಭುವು ಈ ಗವಿಗಳನ್ನು ಕಾರಣವಿಲ್ಲದೆ ಕೊರೆಯುತಿರಬಹುದೆ ? ಬೆಳಕಿಗೆ ಮಾರುಹೋದ್ದ ಜೀವವೆ ! ಕತ್ತಲೆಯ ವೈಭವವನ್ನೂ ತಿಳಿ. ಬೆಳಕು-ಕತ್ತಲೆಗಳೆರಡನ್ನೂ ತಿಳಿಯದೆ ಪರಂಜ್ಯೋತಿಯ ಪ್ರಜ್ಞೆ ಬರಲಾರದು ನಿನಗೆ. ಸುಖ-ದುಃಖಗಳ ದ್ವಂದ್ವವನ್ನು ಅನುಭವಿಸಿ ಸಮಶೀತೋಷ್ಣನಾಗಿ ನಿಂತಾಗ ಆನಂದವು ಹಸ್ತಗತವಾದೀತು. ಮಾತು-ಮೌನಗಳ ಸ್ಥಿತಿಗಳೆರಡನ್ನೂ ಸವಿದಾಗ ಶಬ್ದದಾಚೆಯ ಶಬ್ದವು ಕೇಳಿಸೀತು.

ವಿದ್ಯೆಯ ಅಪೂರ್ಣತೆಯನ್ನು ತೋರಿಸಲು ಅವಿದ್ಯೆಯ ಜನನವಾಗಿದೆ. ಜಗತ್ತಿನಲ್ಲಿ ದುಷ್ಟವಾದುದು ಇರುವದು,-ಬರಿ ಸಾತ್ವಿಕತೆಯ ಅಪೂರ್ಣತೆಯನ್ನು ತೋರಿಸುವದಕ್ಕಾಗಿ. ಬಾಳ ಕರವಾಳ ಕುಸುಮದಂತೆ ಮೃದುವಾದರೂ ವಜ್ರದಷ್ಟು ಕಠಿಣ. ಆದರ ಈ ಕಠಿಣತೆಯನ್ನು ಪೂರ್ಣಗೊಳಿಸಲು ಅದಕ್ಕೆ ಕಾಠಿಣ್ಯದ ಸಂಸ್ಕಾರವನ್ನು ಕೊಡದೆ ಗತಿಯಿಲ್ಲ. ಬೆಂಕಿಯಲ್ಲಿ ಕಾಯಿಸಿ ನೀರುಣಿಸಬೇಕಾಗಿದೆ,-ಬಾಳ ಕರವಾಳಕ್ಕೆ. ಪಂಚಮಹಾಭೂತಗಳೂ ಸಚ್ಚಿದಾನಂದದ ಲೀಲಾವತಾರ. ಅವಿಲ್ಲದೆ ಆ ಅವತಾರವೇ ಅಪೂರ್ಣವಾಗುತ್ತಿತ್ತು.

ಸಚ್ಚಿದಾನಂದವು ಬರಿ ಕನಸಿನ ಬದುಕಲ್ಲ; ನನಸಿನ ಘನೀಭೂತ
ತ್ವವೂ ಅಹುದು. ಈ ದ್ವಂದ್ವವನ್ನು ತಿಳಿಯದೆ ನೀನು ನಿರ್ದ್ವಂದ್ವನಾಗಲಾರೆ.
ದೈವೀಸಂಪತ್ತಿನೊಡನೆ ಆಸುರೀಸಂಪತ್ತಿರದೆ ಈಶ್ವರನ ಐಶ್ವರ್ಯವು
ಪೂರ್ಣವಾಗಲಾರದು. ಇದನ್ನು ತಿಳಿ. ಆ ತಿಳಿವಿನಂತೆ ಬಾಳು.

ಜಗತ್ತಿನ ರುದ್ರ ರೂಪವು ಕಾಣಿಸಿಕೊಳ್ಳುವದು ಎರಡು ತೆರನಾಗಿ:—
ಕಾಲದ ಕಾಂಡಪಟದ ಮೇಲೆ ಘಟನೆಯೊಂದು; ಸ್ಥಲದ ನೆಲದ ಮೇಲೆ
ಗುಣ, ವ್ಯಕ್ತಿ ಇಲ್ಲವೆ ಪ್ರಾಣಿಯೊಂದು. ಬಂದ ಘಟನೆಗೆ ತಲೆಬಾಗು; ಎದುರು
ನಿಂತ ಕೆಡುಕನ್ನು ಕಂಡು ತಾಳ್ಮೆಗೆಡಬೇಡ. ಯಾವ ವಿಧಿ ಬಂದು ಕೆಣಕಿ
ದರೂ ನಿನ್ನ ಗುಪ್ತನಿಧಿಯು ಸಂಚಯಕ್ಕಾಗಿ ಅದು ದೇವನು ಹಾಕಿದ
ಹೊಂಚೆಂಬ ಅಚಲ ಶ್ರದ್ಧೆಯನ್ನು ತಾಳು. ಎಲ್ಲವನ್ನೂ ಆ ವಿಧಿಯು ತರಿ
ದೊಗೆದಾಗ,—ತನ್ನ ದೈವಿಕತೆಯ ನಗ್ನಸೌಂದರ್ಯದಲ್ಲಿ ಹೊಳೆದು
ನಿಂತಾನು ನಿನ್ನ ಆತ್ಮಪುರುಷ !

ಆದರೆ ಭಯಪಡಬೇಡ ಮಹಾ ಕಾಳಿಯಾಗಿ ನಿನ್ನನ್ನು ಕೆಣಕುವಂತೆ
ಪರಾಪ್ರಕೃತಿಯು ಮಹಾಲಕ್ಷ್ಮಿಯೂ ಆಗಿ ನಿನ್ನನ್ನು ಕಾಪಾಡುತ್ತಾಳೆ.
ಮಾಹೇಶ್ವರಿಯಾಗಿ ನಿನಗೆ ಪರದ ಸವಿಯನ್ನು ಕಲಿಸುವಂತೆ ಮಹಾ ಸರಸ್ವತಿ
ಯಾಗಿ ಜೀವಿತಕ್ಕೆ ಆ ಮಾಧುರ್ಯವನ್ನು ತರುವ ಕುಶಲತೆಯನ್ನೂ ತಿಳಿಸು
ತ್ತಾಳೆ. ಆನಂದಮಯಿಯಾಗಿ ನಿನ್ನನ್ನು ಹಿಗ್ಗಿಸುತ್ತಾಳೆ. ಅವಿದ್ಯೆಯ
ಮೊಲೆಗೂಸಾದ ನಿನ್ನನ್ನು ಪುರುಷೋತ್ತಮನಾಗುವಂತೆ ಸಂವರ್ಧಿಸುತ್ತಾಳೆ
ಪರಾಪ್ರಕೃತಿ. ಅವಳ ಒಂದು ಮೊಲೆಯಿಂದ ವಿಷ, ಇನ್ನೊಂದರಿಂದ ಅಮೃತ
ನಿನ್ನ ಬಾಯಿಗೆ ಬಿದ್ದಲ್ಲಿ,—ಮೊಲೆಗೊಡುವವಳು ಮಾತಾಯಿ, ನೀನು ಕುಡಿ
ಯುವದು ಅವಳ ಎದೆ ಹಾಲೆಂಬುದನ್ನು ಎಂದಿಗೂ ಮರೆಯದಿರು.

ಆಗ ಕಷ್ಟಪರಂಪರೆಯ ಬೀಡಾದ, ಅಗ್ನಿದಿವ್ಯಗಳ ಯಜ್ಞಶಾಲೆ
ಯಾದ, ಪರಿವರ್ತನದ ಪ್ರಯೋಗಮಂದಿರವಾದ ಈ ಜಗತ್ತು ದಿವ್ಯ ಭವ್ಯ
ಈಶಾವಸ್ಯವೆಂಬುದೂ ನಿನಗೆ ಮನದಟ್ಟಾದೀತು !

# (೧೯) ಸಮಾಜಲ್ಲಿ ಆಂದತರಿಕ ಜೀವಿಯ ಬಾಳು

'ಆತ್ಮಾನಂ ಸರ್ವ ಭೂತೇಷು, ಸರ್ವ ಭೂತಾನಿ ಚಾತ್ಮನಿ,–' ಎಂದು ಗೀತೆಯು ಹೇಳಿದೆ. 'ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಾಣ ಮಕ್ಕು' ಎಂದು ಸರ್ವಜ್ಞನು ಉಸಿರಿದ್ದಾನೆ. 'To see ourselves as others see us' –ಉಳಿದವರ ಕಣ್ಣಿನಲ್ಲಿ ಹೊಕ್ಕು ಅವರು ನಮ್ಮನ್ನು ಯಾವ ದೃಷ್ಟಿಯಿಂದ ಕಾಣುವರೋ ಆ ದೃಷ್ಟಿಯಿಂದ ನಾವು ನಮ್ಮನ್ನು ಕಂಡುಕೊಳ್ಳಬೇಕು' ಎಂದು ಬರ್ನ್ಸ್ ಕವಿ ಹೇಳಿದ್ದಾನೆ. ಅಂತೂ ನಮ್ಮ ಜೀವನದಲ್ಲಿ ಅನ್ಯರ ದೃಷ್ಟಿಕೋನಕ್ಕೂ ಅನ್ಯರ ಜೀವನದಲ್ಲಿ ನಮ್ಮ ದೃಷ್ಟಿಕೋನಕ್ಕೂ ಒಂದು ಹೆಚ್ಚಿನ ಸ್ಥಾನವಿದೆ.

ಆಂತರಿಕ ಜೀವಿಗೆ ಉಳಿದವರ ಯೋಗಕ್ಷೇಮವನ್ನು ನೋಡಿಕೊಳ್ಳುವದು ಒಂದು ದೊಡ್ಡ ಸಮಸ್ಯೆಯಾಗುತ್ತದೆ. ತನ್ನ ಯೋಗಕ್ಷೇಮವನ್ನೇ ಭಗವಂತನ ಮೇಲೆ ಹೊರಿಸಲು ಹೊರಟ ಅವನಿಗೆ ಉಳಿದವರ ಯೋಗಕ್ಷೇಮವನ್ನು ಹೊರುವ ಕಲ್ಪನೆಯು ಧ್ಯೇಯಗಳ ಜಗತ್ತಿನಲ್ಲಿ ಹೊಳೆಯುವದು; ಸುಲಭವಾಗಿ ರಕ್ತಗತವಾಗುವದಿಲ್ಲ. ಉಳಿದವರನ್ನು ಪ್ರೀತಿಯಿಂದ ಅವನು ಕಾಣಬಲ್ಲ. ತನ್ನಿಂದ ಆದಷ್ಟು ಯಾರಿಗೂ ತೊಂದರೆಯಾಗಿರಬಾರದೆಂದು ಅವನು ಎಚ್ಚರಪಡಬಲ್ಲ. ಸಾಹಿತ್ತಿಕ ದೃಷ್ಟಿಯಿಂದ ಪರಾಂತಃಕರಣವನ್ನು ಪ್ರವೇಶಿಸಿ ಅದನ್ನು ತಿಳಿದುಕೊಳ್ಳಲೂ ಬಲ್ಲ. ಆದರೆ ಸಹಸಾ ಉಳಿದ ಹೃದಯಗಳ ಆಸೆಗಳನ್ನು ತಾನಾಗಿಯೇ ಅಭ್ಯಸಿಸಿ ಅವುಗಳನ್ನು ಕಳೆಯಲು ಹವಣಿಸುವದು ಅವನ ಸಹಜ ಸಿದ್ಧಿಯಾಚೆಗಿನ ಮಾತು. ಏಕಂದರೆ ತನ್ನ ಮನದ ಮೊಗಸಾಲೆಯನ್ನು ಓರಣವಾಗಿಸುವದರಲ್ಲಿಯೇ ಅವನ ಎಲ್ಲ ಶಕ್ತಿಯೂ ವೆಚ್ಚವಾಗುತ್ತಿರುತ್ತದೆ. ತನ್ನ ಅಂತರಂಗದ ಭವ್ಯತೆಯು ಅವನನ್ನು ಕರೆಯುತ್ತಿರುತ್ತದೆ. ತನ್ನ ಗುಂಗಿನಲ್ಲಿದ್ದ ಈ ಅಂತರ್ಜೀವಿಗೆ ಪರರ ಹಂಗೆಲ್ಲಿ?

ಒಬ್ಬ ಹಿರಿಯ ಸಾಹಿತಿ ಹೇಳುತ್ತಿದ್ದ ಮಾತು ಇದು: ಕಲೋಪಾಸಕನಿಗೆ ಸಮಾಜದಲ್ಲಿ ಯಾವ ಹೊಣೆಯೂ ಇರಬಾರದು. ಸಮಾಜದ ಕಲ್ಯಾಣವನ್ನು ಪೋಷಿಸುವ ಒಂದು ಶಕ್ತಿಯು ಅವನಲ್ಲಿರುತ್ತದೆ. ಅದಕ್ಕಾಗಿ ಅವನನ್ನು

ಪೋಷಿಸುವ ಹೊಣೆಯು ಸಮಾಜದ ಮೇಲೆ. ಸಾಕಿದ ನಾಯಿಗೊಂದು ಕೊರಳುಪಟ್ಟಿಯಿರುವಂತೆ ಕಲೋಪಾಸಕನಿಗೂ 'ಕಲೋಪಾಸಕ' ಎಂದು ಕೊರಳಪಟ್ಟಿಯಿರಬೇಕು. ಅವನು ಅಂಗಡಿಗೆ ಹೋಗಲಿ, ಹೋಟೆಲಿಗೆ ಹೋಗಲಿ,—ಅವನು ಕಲೋಪಾಸಕನೆಂಬುದನ್ನು ಕಂಡ ಕೂಡಲೆ ಎಲ್ಲ ವ್ಯಕ್ತಿಗಳೂ ಅವನ ಆವಶ್ಯಕತೆಗಳನ್ನು ಪೂರೈಸಬೇಕು.

ಒಂದು ವ್ಯಾವಹಾರಿಕ ರೂಪಕದ ದ್ವಾರವಾಗಿ ಈ ಮಾತನ್ನು ಹೇಳಲಾಗಿದೆ. ಪ್ರಬುದ್ಧ ಸಮಾಜದಲ್ಲಿ ಕಲೋಪಾಸಕನಿಗೆ ಕಲೋಪಾಸಕನೆಂದೇ ಅಚ್ಚುಕಟ್ಟಾಗಿ ತೊಂದರೆಯಿಲ್ಲದೆ ಜೀವಿಸಲು ಬಂದಿರಬೇಕೆಂಬುದು ಅದರ ಅರ್ಥವಾಗಿದೆ. ಇದನ್ನು ಯಾರಾದರೂ ಒಪ್ಪಬಹುದು. ಏಕೆಂದರೆ ಆದರ್ಶ ಸಮಾಜದಲ್ಲಿ ಆರ್ಥಿಕ ವ್ಯವಸ್ಥೆಯು ಯಾವದೇ ವ್ಯಕ್ತಿಯಲ್ಲಿದ್ದ ಒಳ್ಳೆಯ ಶಕ್ತಿಗಳ ವಿಕಾಸಕ್ಕೆ ಮುಳುವಾಗಿರಬಾರದು.

ಆದರೆ ಸಾಮಾಜಿಕ ಹಾಗು ನೈತಿಕ ಇಲ್ಲವೆ ಅನ್ಯೋನ್ಯ ಆಚಾರಗಳಲ್ಲಿಯೂ ಸಾಹಿತಿಗೆ—ಇಲ್ಲವೆ ಆಂತರಿಕ ಜೀವಿಗೆ—ಇಂಥ ಸವಲತ್ತುಗಳನ್ನು ಕೊಡಬಹುದೆ? ಸಮಾಜಕ್ಕೆ, ಸ್ನೇಹಿತರಿಗೆ, ನೆರೆಹೊರೆಯವರಿಗೆ ಇಂಥ ಜೀವಿಯು ಕೆಲವೊಂದು ಕರ್ತವ್ಯಗಳಿಂದ ಬದ್ಧನಾಗಿರುವದಿಲ್ಲವೆ? ಕಲೋಪಾಸಕನೂ ಒಬ್ಬ ವ್ಯಕ್ತಿ; ಸಮಾಜದ—ಮನುಕುಲದ-ಒಂದು ಘಟಕ. ಮುಖ್ಯವಾಗಿ ಕಲೋಪಾಸಕನೆಂದು ಕಲಾಸೇವೆಯನ್ನು ಸಲ್ಲಿಸುವದಲ್ಲದೆ ಓರ್ವ ವ್ಯಕ್ತಿಯೆಂದು ಅವನ ವ್ಯಕ್ತಿತ್ವ—ವಿಕಾಸವೂ ಕಾಲಸಿಯತಿಗನು ಸರಿಸಿ ಆಗಬೇಕಾಗಿದೆಯಲ್ಲವೆ? ಪರಾಂತಃಕರಣಪ್ರವೇಶಿಯಾಗಿ ಜನತೆಯ ಮನವನ್ನೂ ಅಂತಃಕರಣವನ್ನೂ ಅವನು ತಿದ್ದಬಹುದು. ಆದರೆ ಯಾವ ವ್ಯಕ್ತಿಗಳೊಡನೆ ಅವನ ಸಂಬಂಧ ಬರುವದೋ ಅವನ ಅಂತಃಕರಣವನ್ನು ನೋಯಿಸದಂತೆ—ತನ್ನನ್ನು ಅಲಕ್ಷಿಸಿಯಾದರೂ ಉಳಿದವರ ಹಿತಚಿಂತನೆ ಹಾಗು ಹಿತಸಾಧನೆಯಲ್ಲಿ ತೊಡಗುವದು ಎಲ್ಲ ವ್ಯಕ್ತಿಗಳಂತೆ ಅವನ ಕರ್ತವ್ಯವೂ ಆಗಿದೆ.

ಇಲ್ಲಿ ಎಲ್ಲ ಧರ್ಮಗಳೂ ಹಾಕಿಕೊಟ್ಟ ಒಂದು ರತ್ನಪಾಠವಿದೆ. ಸಾಧಕನಿಗೆ, ಆಂತರಿಕ ಜೀವಿಗೆ,—ಯಾವ ತೊಂದರೆಯೂ ಆಗಬಾರದೆಂದು ಎಲ್ಲ ಧರ್ಮಗಳೂ ಅವನನ್ನು ಸಮಾಜವೇ ನೋಡಿಕೊಳ್ಳಬೇಕೆಂದು ಹೇಳಿವೆ.

ಧರ್ಮಶಾಲೆಗಳು, ವಿಹಾರಗಳು, ಅನ್ನಛತ್ರಗಳು.—ಇವು ಏರ್ಪಟ್ಟಿರುವದು ಇಂಥವರಿಗಾಗಿ ಹಾಗು ನಿರ್ಗತಿಕರಿಗಾಗಿ ಅನೇಕ ದೇವಸ್ಥಾನಗಳಲ್ಲಿಯೂ ಮಠಗಳಲ್ಲಿಯೂ ಇಂಥ ಏರ್ಪಾಟಿದೆ. ಇಂಥ ಸಾಧಕರನ್ನು ಮನೆಯಲ್ಲಿ ಟ್ಟುಕೊಂಡು ಅವರ ಯೋಗಕ್ಷೇಮವನ್ನು ನೋಡಿಕೊಂಡವರೂ ಉಂಟು.

ಇದು ಸಮಾಜದ ಕರ್ತವ್ಯವಾಯಿತು ಆದರೆ ಸಾಧಕನ ಕರ್ತವ್ಯವೇನು ? ಇನ್ನೊಬ್ಬರ ಮೇಲೆ ಅವನೆಂದಿಗೂ ಭಾರ ಹಾಕಿರಬಾರದು. ಧರ್ಮದ ಹೆಸರಿನಲ್ಲಿ ಭಿಕ್ಷೆ ಬೇಡುವವರ ಸಂಖ್ಯೆ ಬೆಳೆದು ಧರ್ಮವನ್ನೇ ಅಧೋಗತಿಗೆಳೆದಿದೆ. ಸಾಧಕನು ಉಪವಾಸ ಸಾಯಬಹುದು. ಆದರೆ ಇನ್ನೊಬ್ಬರು ತಾವಾಗಿಯೇ ಕೈಯೆತ್ತಿ ಕೊಡದೆ ಅವನು ಏನನ್ನೂ ಸ್ವೀಕರಿಸಬಾರದು. ದಾತೃವಿನ ಮನವನ್ನು ಹತ್ತು ಸಲ ಪರೀಕ್ಷಿಸಿ ದಾನವನ್ನು ಸ್ವೀಕರಿಸಬೇಕು. ಕೇಳಿ ದೊರಕಿಸಿಗೊಂಡ ಸಾಮಗ್ರಿ-ಸೌಕರ್ಯಗಳ ಮೇಲೆ ನಿಂತ ಸಾಧನೆ-ತಪಸ್ಸು ಮರವನ್ನು ಆಶ್ರಯಿಸಿ ಬೆಳೆದ ಬಳ್ಳಿಯಂತೆ. ಅದಕ್ಕೆ ಸ್ವಯಂ ಪೂರ್ಣತೆ ಇಲ್ಲ.

ಆದರೆ ಇಂದಿನ ಆಂತರಿಕ ಜೀವಿಯ ಪ್ರಶ್ನೆಯು ಇದಕ್ಕೂ ಸ್ವಲ್ಪ ಬೇರೆಯಾಗಿದೆ. ಅವನು ಹೆಚ್ಚಾಗಿ ಸಮಾಜದ ಮಧ್ಯದಲ್ಲಿಯೇ ಇಂದು ಬಾಳುತ್ತಾನೆ. ಎಲ್ಲರಂತೆ ಸಮಾಜದಲ್ಲಿ ಉದರನಿರ್ವಾಹಕ್ಕಾಗಿ ಒಂದು ಕೆಲಸವನ್ನು ಅಂಟಿಕೊಂಡು ನಿಂತಿರುತ್ತಾನೆ. ಹೀಗಾಗಿ ಅವನು ತನ್ನ ಆಂತರಿಕ ಜೀವನವನ್ನು ಬೆಳೆಸುವ ಹೊತ್ತಿನಲ್ಲಿಯೇ ಸಮಾಜದಲ್ಲಿಯೂ ತೂಕ ತಪ್ಪದಂತೆ ನಡೆಯಬೇಕಾಗುತ್ತದೆ. ಒಟ್ಟಿನಲ್ಲಿ ಹೇಳುವದಾದರೆ ಅವನು ಯೋಗಸ್ಥನೂ ಗೃಹಸ್ಥನೂ ಕೂಡಿಯೇ ಆಗಿ ಇಂದು ಬಾಳಬೇಕಾಗಿದೆ. ಗೃಹಸ್ಥಾಶ್ರಮವು ಧನ್ಯವೆಂದು ಕಾಲಿದಾಸನು ಹೇಳುವದಿಲ್ಲ. ಅವನು ಕಲ್ಪಿಸಿದ ಒಬ್ಬ ಋಷಿ-ಆರಣ್ಯಕ-ಆ ಮಾತನ್ನು ಹೇಳುತ್ತಾನೆ ದೂರದ ಗುಡ್ಡ ಕಣ್ಣಿಗೆ ನುಣ್ಣಗೆ. ಗೃಹಸ್ಥಾಶ್ರಮದ ಅಗ್ನಿದಿವ್ಯಗಳು ಆರಣ್ಯಕರಿಗೆ ಹೇಗೆ ಗೊತ್ತಾಗಬೇಕು?

ಆದರೂ ಒಂದರ್ಥದಲ್ಲಿ ಗೃಹಸ್ಥಾಶ್ರಮವು ಧನ್ಯವೆಂದೇ ಹೇಳಬೇಕು. ಅದನ್ನು ಆಶ್ರಯಿಸಿದ ಆಂತರಿಕ ಜೀವಿಗೆ ರಾಜಯೋಗ ಹಾಗು ಕರ್ಮಯೋಗದ ಮಾರ್ಗಗಳೆರಡೂ ತೆರೆದಿರುತ್ತವೆ. ಅವನು ತನ್ನ ಅಂತಃಸಾಗರದಲ್ಲಿ ಮುಳುಗಿ ತಂದ ರತ್ನಗಳನ್ನು ಪರೀಕ್ಷಿಸುವ ರತ್ನ ರಸಿಕರು ಅವನ ಸುತ್ತಣ

ಸಮಾಜದಲ್ಲಿಯೇ ಇರುತ್ತಾರೆ. ಹೆಜ್ಜೆ ಹೆಜ್ಜೆಗೆ ಅವನ ಪರೀಕ್ಷೆಯಾಗುತ್ತದೆ. ತಪ್ಪಡಿಯಿಟ್ಟೊಡನೆ ಅವನ ತಲೆಗೆ ದಂಡ ಕಟ್ಟಲಾಗುತ್ತದೆ. ಒಮ್ಮೊಮ್ಮೆ ತಪ್ಪಿಲ್ಲದೆಯೂ ಅವನು ದಂಡವನ್ನು ತೆರಬೇಕಾಗಬಹುದು. ಹೀಗೆ ಸಮ್ಯಕ್ ದರ್ಶನದ ಸಮತೂಕವನ್ನು ಪಡೆಯದೆ ಅವನಿಗೆ ಗತ್ಯಂತರವಿಲ್ಲ.

ಈ ಮಾತು ಸಾಧಿಸದೆ ಯಾವ ವ್ಯಕ್ತಿತ್ವಕ್ಕೂ ಪೂರ್ಣತೆ ಇಲ್ಲ. ಹೆರವರ ಹಿತಚಿಂತನೆ ಮಾಡುವದು ಸಗುಣಬ್ರಹ್ಮದ ಉಪಾಸನೆಯ ಒಂದು ಭಾಗ. ತನ್ನಂತೆ ಪರರನ್ನು ಬಗೆಯಬೇಕಾದ ಕಾರಣ,— ತನ್ನಲ್ಲಿಯೂ ಪರರಲ್ಲಿಯೂ ಒಂದೇ ದೈವಿಕತೆಯು ಗುಪ್ತವಾಗಿ ನೆಲಸಿದೆಯೆಂದು. ಇಂಥ ಒಂದು ಸ್ಥೂಲಭಾವನೆಯು ಮನಸ್ಸಿನಲ್ಲಿದ್ದರೂ ಅದನ್ನು ವ್ಯವಹಾರದಲ್ಲಿ ಇಳಿಸುವ ಜಾಣ್ಮೆಯೇ ಒಂದು ಕಲೆ. ಕರ್ಮಕುಶಲತೆ. ಇಂದಿನ ಕಲೋಪಾಸಕನೂ ಆಂತರಿಕ ಜೀವಿಯೂ ಈ ಮಾತನ್ನು ತಿಳಿದು ಅದನ್ನು ಅರಗಿಸಿಕೊಳ್ಳಬೇಕು. ಸಾಮಾಜಿಕ ಪುನರ್ಘಟನೆಯಲ್ಲಿ ರಶ್ಯದ ಸಮತಾವಾದವೂ ಭಾರತದ ಆಧ್ಯಾತ್ಮವಾದವೂ ರೂಪಗೊಂಡು ಬೆರೆಯಬೇಕಾಗಿದ್ದಂತೆ ಇಂದಿನ ಒರ್ವ ವ್ಯಕ್ತಿಯ ಜೀವನದಲ್ಲಿ ಆಂತರಿಕದೃಷ್ಟಿಯು ಹಾಗು ಅನ್ಯರ ಹಿತ-ದೃಷ್ಟಿಗಳ ಪ್ರಜ್ಞೆಯು ಸಮ್ಮಿಲನವಾಗಬೇಕಾಗಿದೆ. ರಸವೇ ಜನನ. ರಸದ ಸೂಕ್ಷ್ಮತೆ-ವಿಶಾಲತೆಗಳ ವ್ಯತ್ಯಯರಹಿತ ವಿಕಾಸವೇ ವ್ಯಕ್ತಿಜೀವನ. ಸಮರಸವೇ ಸಹಜೀವನ. ಬಗಿ ಸ್ವಾನುಭೂತಿಯಿಂದ ಸಾಗುವ ಜೀವನರಥಕ್ಕೆ ಒಗ್ಗಾಲಿಯ ಭೀತಿಯಿದೆ. ಸಹಾನುಭೂತಿಯೂ ಅದರ ಜೋಡಣೆಗೆ ಅವಶ್ಯವಾದುದು.

ಇಂಥ ಸಹಾನುಭೂತಿಗಾಗಿ ಎರಡು ಕಣ್ಣು ಯಾವಾಗಲೂ ತೆರೆದಿರಬೇಕಾಗುತ್ತವೆ :— ಒಂದು ತನ್ನಿಂದ ಹೆರವರಿಗೆ ಯಾವ ತೊಂದರೆಯೂ ಮಾನಸಿಕ ವ್ಯಥೆಯೂ ಆಗದಂತೆ ಎಚ್ಚರಪಡುವ ಕಣ್ಣು; ಇನ್ನೊಂದು ತನ್ನ ಅಳವಿನಲ್ಲಿ ಹೆರವರ ಐಹಿಕ, ಮಾನಸಿಕ ಇಲ್ಲವೆ ಆತ್ಮಿಕ ಹಿತಚಿಂತನೆ ಎಲ್ಲಿ ಎಲ್ಲಿ ಸಾಧ್ಯ ಎಂದು ಸದಾ ಅಭ್ಯಸಿಸುವ ಕಣ್ಣು. ಅಂತೇ ದೇವರು ಸಾರತಃ ದೃಷ್ಟಿಯಲ್ಲಿ ಒಂದೇ ಆದ ಎರಡು ಕಣ್ಣುಗಳನ್ನು ಮಾನವನಿಗೆ ಕೊಟ್ಟು ಅವನ ಆಂತರಿಕ ವಿಕಾಸಕ್ಕಾಗಿ ಆಜ್ಞಾಚಕ್ರದಲ್ಲಿಯ ಒಳಗಣ್ಣನ್ನು ಕೊಟ್ಟಿದ್ದಾನೆ.

## (೨೦) ಜೀವನದ ಅಳತೆಗೋಲು

ನಮ್ಮ ಭಾವನೆ-ಆಚಾರ-ವಿಚಾರಗಳಿಗೆ ಇರುವ ಅಳತೆಗೋಲೆಂದರೆ ಇದು: ವ್ಯಕ್ತಿಯ ಪ್ರಗತಿಗೆ ಅವು ಎಷ್ಟೊಂದು ಪ್ರಯೋಜಕರ ? ಸಮಾಜದ ಪ್ರಗತಿಗೆ ಅವು ಎಷ್ಟು ನೆರವಾಗಬಲ್ಲವು ? ಒಂದೊಂದು ಘಟನೆ, ಕೃತಿ, ಭಾವ ಇಲ್ಲವೆ ಭಾವನೆಯನ್ನೂ ವ್ಯಕ್ತಿಯು ಈ ಅಳತೆಗೋಲಿನಿಂದ ಅಳೆಯಬೇಕಾಗುವದು. ಈ ತಾಳದ ಸಂಗೀತವನ್ನೇ ಜೀವನವು ಗೊತ್ತಿರದೆ ಇಲ್ಲವೆ ಗೊತ್ತುಮಾಡಿಕೊಂಡು ಅನುಸರಿಸುವದು.

ಜೀವನದ ಪ್ರಗತಿಯೆಂದರೇನು ? ಸತ್ಯ, ಸೌಂದರ್ಯ, ಕಲ್ಯಾಣ ನಲ್ಮೆ ಹಾಗು ಶಕ್ತಿಗಳನ್ನು ಅರಗಿಸಿಕೊಳ್ಳುವದರಲ್ಲಿ ಅದು ತೋರುವ ವಿಕಾಸ. ಜೀವನದ ಈ ಪಂಚಮುಖಗಳೂ ಕಾಂತಿಯುತವಾಗಿರಬೇಕು. ಈ ಐದು ದೃಷ್ಟಿಗಳಲ್ಲಿ ಯಾವುದರಿಂದ ನೋಡಿದರೂ ಅದರ ಕಸುವು ಗೋಚರವಾಗಿರಬೇಕು. ಅಂದರೆ ಮಾತ್ರ ಜೀವನವು ಪ್ರಗತಿಪರವಾಗಿದೆಯೆಂದು ನಾವು ಹೇಳಬಲ್ಲೆವು.

ಬುದ್ಧಿಯನ್ನು ಕೇಂದ್ರವಾಗಿಟ್ಟುಕೊಂಡು ಪಡೆದ ಅನುಭವವೇ ಜ್ಞಾನ. ಸತ್ಯದರ್ಶನ. ಪರಾಸ್ಫೂರ್ತಿಯು ಇದನ್ನು ಹೇಗೆ ಹೇಗೆ ಬೆಳಗಿಸುವದೋ ಹಾಗೆ ಸತ್ಯದರ್ಶನವು ನಿಚ್ಚಳವಾಗುತ್ತ ನಡೆಯುವದು.

ಹೃದಯವನ್ನೂ ಕಲ್ಪಕತೆಯನ್ನೂ ಕೇಂದ್ರವಾಗಿಟ್ಟುಕೊಂಡು ಪಡೆದ ಅನುಭವವೇ ಸೌಂದರ್ಯದರ್ಶನ. ಜೀವನವು ಅನಂತ. ಈ ದೃಷ್ಟಿಯಿಂದ ನೋಡಿದಾಗ ಅದರ ಇನ್ನೊಂದು ರೂಪವು ಕಾಣಿಸಿಕೊಳ್ಳುತ್ತದೆ.

ಕ್ರತುಶಕ್ತಿಯನ್ನು ಕೇಂದ್ರವಾಗಿಟ್ಟುಕೊಂಡು ಆದರ್ಶ ಇಲ್ಲವೆ ಉಜ್ವಲ ಭಾವನೆಗಳ ಬೆಳಕಿನಲ್ಲಿ ಸಾಧಿಸಿದ ಜೀವನ ಪರಿವರ್ತನವೇ ಕಲ್ಯಾಣ. ಆದರ್ಶವನ್ನು ವಾಸ್ತವಿಕತೆಯು ಪಡಿಗನ್ನಡಿಸುವಂತೆ ಸಾಹಸಗೆಯ್ಯುವದೇ ಕಲ್ಯಾಣದ ದಾರಿ.

ನಲ್ಮೆಯು ಮಾನವನ ವ್ಯಕ್ತಿತ್ವಕ್ಕೆ ವಿಸ್ತಾರವನ್ನು ಕಲ್ಪಿಸಿಕೊಡುತ್ತದೆ. ಆಧ್ಯಾತ್ಮಿಕ ಶಕ್ತಿಗಳನ್ನು ಆಮಂತ್ರಿಸಿ, ಚೈತ್ಯಪುರುಷನನ್ನು ಜಾಗ್ರತಗೊಳಿಸುವದಲ್ಲದೆ ಸುತ್ತಣ ಜಗತ್ತಿನೊಡನೆ ಸಹಜ ಸುಂದರ ಮಿಲನವನ್ನು ಸಾಧಿಸುತ್ತದೆ.

ಶಕ್ತಿಯು ಕಲ್ಯಾಣವನ್ನು ವಿಶಾಲತರ ಕ್ಷೇತ್ರದಲ್ಲಿ ಸಾಧಿಸುವ ಸಾಧನೆ. ಸ್ವಂತದ ಜೀವನವನ್ನು ಚೊಕ್ಕಗೊಳಿಸುವಂತೆ ವ್ಯಕ್ತಿಯು ತನ್ನ ಸುತ್ತಣ ಜೀವನವನ್ನೂ ಚೊಕ್ಕಗೊಳಿಸಬಲ್ಲ. ತಾನು ಪಡೆದಷ್ಟು ಪೂರ್ಣತೆಯನ್ನು ಸುತ್ತಣ ಜಗತ್ತಿಗೂ ಕೊಡಬಲ್ಲ. ಸಂಪತ್ತು, ವಿವೇಕ, ವಾಗ್ಮಿತನ, ಕಲಾ ನಿಪುಣತೆ, ಆಡಳಿತದ ಅರಿವು, ವ್ಯಕ್ತಿಸಮುದಾಯಗಳ ಮೇಲೆ ಪ್ರಭಾವ ವನ್ನು ಬೀರುವ ಇನ್ನುಳಿದ ಸಾಧನೆಗಳು, ಆತ್ಮದ ವರ್ಚಸ್ಸು,—ಇವೆಲ್ಲ ಒಂದು ರೀತಿಯಿಂದ ವಿಶ್ವದ ಪರಿವರ್ತನೆಗಾಗಿ ದೇವರು ಮಾನವನಿಗೆ ಕೊಟ್ಟ ಸಾಧನೆಗಳಾಗಿವೆ.

ಆದರೆ ಶಕ್ತಿಯ ಸಮಾರಾಧನೆಯಲ್ಲಿ ತಾಮಸಿಕ ವೃತ್ತಿಯೇ ಹಿರಿಯ ಆತಂಕವಾಗಿದೆ. ಶಕ್ತಿಯ ಯಾವ ಸಲಕರಣೆಗಳೂ ಇಲ್ಲದೆ ತಮ್ಮ ಕಷ್ಟ ಸಹಿಷ್ಣುತೆ ಹಾಗು ತಪಸ್ಸಿನಿಂದ ತಮ್ಮೊಳಗೆ ಶಕ್ತಿಯನ್ನು ಆಹ್ವಾನಿಸಿ ಅದ್ವಿತೀಯ ವ್ಯಕ್ತಿಯಾಗಿ ಒಂದು ಸಾಮ್ರಾಜ್ಯ ಸರಕಾರದೊಡನೆ ಹೋರಾಡಿದ ಮಹಾತ್ಮರು ಯುಗಪುರುಷರು. ಆದರೆ ಇಂಥ ಮಹಾಪುರುಷರು ಎಷ್ಟು ಮಂದಿ ? ಶಕ್ತಿಯ ಅಪವ್ಯಯವೇ ಜಗತ್ತಿನ ನಿತ್ಯ ನಿಯಮವೆಂಬುವಂತೆ ಭಾಸವಾಗುತ್ತದೆ. ತತ್ಪರಿಣಾಮವಾಗಿ ಋತದ ಬದಲು ಅನೃತಕ್ಕೆ ನಾವು ಪಟ್ಟಗಟ್ಟಿದ್ದೇವೆ. ಜೀವನವನ್ನು ವಿರೂಪಗೊಳಿಸಿದ್ದೇವೆ. ಒಳ್ಳೆಯತನ ವನ್ನು ತಳ್ಳಿ ಹಾಕಿದ್ದೇವೆ. ನಲ್ಮೆಯ ಜಾಗದಲ್ಲಿ ಹಗೆತನವೇ ಮೆರೆಯುತ್ತಿದೆ. ಹೀಗಾಗಿ ಋಷಿಗಳನ್ನು ಅಡವಿಗೆ ತಳ್ಳಿ ಸಾತ್ವಿಕರನ್ನು ಅಸಹಾಯರನ್ನಾಗಿ ಮಾಡಿ ದೌರ್ಜನ್ಯದ ಕೆಂಧೂಳಿಯಲ್ಲಿ ನಾವು ಸಮಾಜವನ್ನು ಕಟ್ಟುತ್ತಿದ್ದೇವೆ.

ಹೀಗಾಗಿ ಸತ್ಯ–ಸೌಂದರ್ಯ–ಕಲ್ಯಾಣ–ಪ್ರೇಮಗಳು ಅಲ್ಲಲ್ಲಿ ವ್ಯಕ್ತಿ ಜೀವನದಲ್ಲಿ ಮಿಂಚಿಹೋಗಿ ಸಮಾಜದಲ್ಲಿ ಸ್ಥಾನವಿಲ್ಲದೆ ಅಂತರಿಕ್ಷದಲ್ಲಿ ಅಲೆದಾಡುತಿವೆ.

ಕಾಣಬಲ್ಲ ಕಣ್ಣಿಗೆ ತೋಳಿನ ಬಲವನ್ನೂ ಅಂಥ ಬಲಕ್ಕೆ ಕಾಣುವ ಕಣ್ಣನ್ನೂ ಕೊಡುವ ಮಹಾ ಪುರುಷನು ಇಂದು ಬೇಕಾಗಿದ್ದಾನೆ. ಹಟಮಾರಿ ಮಗುವಿನಂತೆ ತನ್ನ ಹಿತಕ್ಕೆ ವಿರುದ್ಧವಾಗಿ ನಿಂತು ಮಾನವನು ಇಂದು ಕದನವೆಸಗಿದ್ದಾನೆ. ಆದರೆ ಅವನನ್ನು ದಾರಿಗೆ ತರುವ ತಾಯ್ತನವೂ ಜಗತ್ತಿನಲ್ಲಿ ತಲೆಯೆತ್ತಿದೆಯೆಂಬುದರಲ್ಲಿ ಸಂಶಯವಿಲ್ಲ.

